

# ಸಿದ್ಧಗಂಗಾ



ಮಾರ್ಚ್ ೨೦೦೧






ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವರ್ಣರಂಜಿತ ಹೆಬ್ಬಾಗಿಲು



ಕಣ್ಮನ ತಣಿಸುವ ಬೆಳ್ಳಿಪಾಲಕಿ ಉತ್ಸವ



ಜಾತ್ರೆಯಲ್ಲಿ ಜನಸಾಗರ



ಉತ್ತಮ ರಾಸುಗಳೆಂಬ ಹೆಗ್ಗಳಿಕೆ ಹಿಗ್ಗುತ್ತಿರುವ ರಾಸುಗಳ ಮಾಲೀಕರು



ವಿದ್ಯುತ್ ದೀಪಗಳಿಂದ ಝಗಝಗಿಸುತ್ತಿರುವ ಶ್ರೀಮಠದ ಒಂದು ಸುಂದರ ನೋಟ



ಮುಖಪುಟ
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆಯ
ವಿವಿಧ ದೃಶ್ಯಗಳು

**ಪ್ರಧಾನ ಸಂಪಾದಕ**
ಚನ್ನಪ್ಪ ಎರೇಸೀಮೆ

**ಸಂಪಾದಕ**
ಹೆಚ್. ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್. ಎಸ್. ಸಿದ್ಧಗಂಗಪ್ಪ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ - ೫೭೨ ೧೦೪

**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೪೦೮೭





॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೭ ಮಾರ್ಚಿ ೨೦೦೧ ಸಂಚಿಕೆ : ೩

ಒಳಪುಟಗಳಲ್ಲಿ..........



| ವಿಳಾಸ : | ಚಂದಾ ವಿವರ : |
|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ, | ವಾರ್ಷಿಕ ಚಂದಾ ರೂ. ೧೦೦/- |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ ರೂ. ೫೦೦/- |
| ತುಮಕೂರು ಜಿಲ್ಲೆ-೫೭೨ ೧೦೪ | ಬಿಡಿ ಪ್ರತಿ ರೂ. ೧೦.೦೦ |



# ಜಾಗತೀಕರಣ....

ಜಾಗತೀಕರಣ, ಉದಾರೀಕರಣಗಳು ಇಂದು ವಿಶ್ವದಾದ್ಯಂತ ಚಲಾವಣೆಯಲ್ಲಿರುವ ನಾಜೂಕು ನಾಣ್ಯಗಳು. ಡಾಲರಿನ ಲೆಕ್ಕದಲ್ಲಿ ರಾಷ್ಟ್ರಾದಾಯವನ್ನು ಲೆಕ್ಕವಿಡುವ ಜೀವನ ಶೈಲಿ ನಾಗರಿಕ ಪದ್ಧತಿ. ರಾಜ್ಯವನ್ನು ಮಾಹಿತಿ ತಂತ್ರಜ್ಞಾನದ ಕೇಂದ್ರವನ್ನಾಗಿಸುವ ಪ್ರಯತ್ನ. ಅದಕ್ಕಾಗಿ ಹಲವಾರು ಯೋಜನೆಗಳು. ಹಳ್ಳಿಯಿಂದ ಡಿಳ್ಳಿಯವರೆಗೆ ಕಾನ್ವೆಂಟ್ ಶಾಲೆಗಳು, 'ಕಂಪ್ಯೂಟರ್' ಮಾಯಸುರನ ಕಬಂಧಬಾಹು. ಎತ್ತೆತ್ತ ನೋಡಿದರೂ ಸಾಫ್ಟ್‌ವೇರ್ ಇಂಜನಿಯರುಗಳ ಪರೀಕ್ಷೆ. ಸಾವಿರ ಸಾವಿರ ರೂಪಾಯಿಗಳ ಅವರ ಜೀವನ ವರಸೆ, ಜ್ಞಾನವೆಂದರೆ ಯಂತ್ರ ಜ್ಞಾನ-ತಂತ್ರಜ್ಞಾನ ಮಾತ್ರ ಎಂಬ ಸೀಮಿತ ತಿಳಿವಳಿಕೆಯೆಂಬ ಬಂದಳಿಕೆ, ಭಾಷೆ, ಸಾಹಿತ್ಯ, ರಾಜ್ಯಶಾಸ್ತ್ರ ಸಮಾಜಶಾಸ್ತ್ರ ತತ್ವಶಾಸ್ತ್ರ ಇತಿಹಾಸ, ಶಿಕ್ಷಣ ಮುಂತಾದ ಜ್ಞಾನಶಾಖೆಗಳತ್ತ ಅನಾದರ – ಇದು ಒಂದು ಮುಖವಾದರೆ, ಜನಗಣತಿಯ ಸಂದರ್ಭದಲ್ಲಿ ಎದ್ದ ಹಲವು ಹನ್ನೊಂದು ವಿಧವಾದ ಜಾತಿ, ಧರ್ಮದ ಮಾತುಗಳು. ಅವುಗಳು ಮುಗ್ಧಮನದಲ್ಲಿ ಸೃಷ್ಟಿಸಿದ ಗೊಂದಲಗಳು, ಪ್ರತ್ಯೇಕತಾ ಭಾವನೆಗಳು, ರಾಜ್ಯದ ಗಡಿಸಮಸ್ಯೆಯನ್ನು ಕೆದಕುತ್ತಿರುವ ಅನ್ಯರಾಜ್ಯದ ಮುಖಂಡರ ಹೇಳಿಕೆಗಳು. ಮತ್ತೊಂದು ಕಡೆ, ಟೊಮೆಟೊ ಬೆಳೆದು ಆಲೂಗೆಡ್ಡೆ ಬೆಳೆದು, ಎಲೆಕೋಸು ಬೆಳೆದು, ಮೆಕ್ಕೆಜೋಳ ಬೆಳೆದು ಕಣ್ಣೀರು ಇಡುತ್ತಿರುವ ರೈತರು, ಆತ್ಮಹತ್ಯೆಮಾಡಿಕೊಳ್ಳುತ್ತಿರುವ ಕರುಣಾಜನಕ ದೃಶ್ಯಗಳು. ಇದರ ಜೊತೆಗೆ ಜಾಗತೀಕರಣದ ಒಪ್ಪಂದದಿಂದಾಗಿ ಆಮದಾಗುತ್ತಿರುವ ಸರಕು ಸಾಮಗ್ರಿಗಳು,. ತಂದೊಡ್ಡುತ್ತಿರುವ ವಿಷಮ ಸನ್ನಿವೇಶಗಳು. ಭಾರತೀಯ ಬೆಳೆದ ಆಹಾರ ಪದಾರ್ಥಗಳ ಬೆಲೆಯ ಮುಂದೆ ಆಮದಾದ ಆಹಾರ ಧಾನ್ಯಗಳು ನಂಬಲಾರದಷ್ಟು ಸುಲಭ ಬೆಲೆಗೆ ದೊರಕುತ್ತಿರುವ ಸನ್ನಿವೇಶ. ಆಮದಾದ ಒಂದು ಬ್ಯಾಟರಿ ಷೆಲ್ಲಿನ ಬೆಲೆ ಎರಡು ರೂ, ಅಕ್ಕಿ ಒಂದು ಕೆಜಿಗೆ ಏಳೂ ರೂ. ಆದರೆ, ನಮ್ಮ ಸ್ವದೇಶಿ ಉತ್ಪಾದನೆಗಳಾದ ಬ್ಯಾಟರಿ ಷೆಲ್ಲಿಗೆ ಎಂಟು, ಹತ್ತು ರೂ. ಕೊಟ್ಟು ಕೊಳ್ಳಲು ಯಾರು ಮುಂದೆ ಬರುತ್ತಾರೆ. ಹದಿನೈದು ರೂ. ಕೊಟ್ಟು ಒಂದು ಕೆಜಿ ಅಕ್ಕಿ ಕೊಳ್ಳಲು ಯಾರು ಮನಸ್ಸುಮಾಡುತ್ತಾರೆ, ಇದರಿಂದ ಭವಿಷ್ಯದಲ್ಲಿ ಏನೆಂಥ ದುರಂತವನ್ನು ರಾಷ್ಟ್ರ ಎದುರಿಸಬೇಕಾದೀತು! ರೈತರ ಏನನ್ನು ಬೆಳೆಯಬಲ್ಲ? ಆಮದು ಪದಾರ್ಥಗಳ ಮೇಲೆಯೇ ಜನ ಬದುಕಲಾದೀತೆ? ಹೆತ್ತ ತಾಯಿಯನ್ನು ಮಾರಿ ತುತ್ತುಗಳಿಸುವರಾಗಲಾರದೆ? ಆಡಳಿತ ಸೂತ್ರ ಹಿಡಿದಿರುವ ಮಹನೀಯರ ಆಲೋಚನಾ ಸರಣಿಯ ಕಹಿಯನ್ನು ಪ್ರಜೆ ಅನಿವಾರ್ಯವಾಗಿ ಉಣ್ಣಬೇಕೆ? ಇದರ ಜೊತೆಗೆ ನಮ್ಮ ಸರ್ಕಾರ ಶಿಕ್ಷಣ ಕ್ಷೇತ್ರದಲ್ಲಿ ಎಬ್ಬಿಸುತ್ತಿರುವ ಬದಲಾವಣೆಯ ಸಮಸ್ಯೆಯ ಸುಳಿಗಳೆಷ್ಟು? ಅನುದಾನಕಡಿತ, ಮತ್ತೆ ಅದರ ರದ್ಧತಿ, ಪದವಿ, ಪದವಿಪೂರ್ವ ಕಾಲೇಜುಗಳ ಪ್ರತ್ಯೇಕತೆ, ವೇಳಾಪಟ್ಟಿಯ ಬದಲಾವಣೆ, ಶುಲ್ಕದ ಹೆಚ್ಚಳ. ತಾಂತ್ರಿಕ ಮತ್ತು ವೈದ್ಯಕೀಯ ಕಾಲೇಜುಗಳ ಹೇರಳ ಶುಲ್ಕ, ಇವೆಲ್ಲ ಯಾರಿಗಾಗಿ? ಏತಕ್ಕಾಗಿ? ಒಬ್ಬ ಬಡವ ಇಷ್ಟೊಂದು ಶುಲ್ಕತೆತ್ತು ತನ್ನ ಮಕ್ಕಳನ್ನು ಓದಿಸಬಲ್ಲನೆ? ಇದಕ್ಕೆಲ್ಲ ಕಾರಣ ಏನು? ನಮ್ಮ ಜೀವನ ಶೈಲಿ ಅಲ್ಲವೇ? ಭೋಗತೃಷೆತಾನೆ? ಸೇವೆಯ ಹೆಸರಿನಲ್ಲಿ ನಡೆದಿರುವ ಭ್ರಷ್ಟಾಚಾರವಲ್ಲದೆ ಇನ್ನೇನು? ಹಿಂದೆ ನಿರಂಕುಶ ಪ್ರಭುತ್ವವಿದ್ದಾಗ ಒಬ್ಬರಾಜನಿರುತ್ತಿದ್ದ. ಈಗ ಹಳ್ಳಿಹಳ್ಳಿಗೆ 'ಪುಟ್ಟರಾಜ'ರು, ಅವರ ಪರಿವಾರ ಇದೆ ಎನ್ನುತ್ತಾನೆ ಸಾಮಾನ್ಯಪ್ರಜೆ. ''ಇಂದು ಮರಣದಾಖಲೆ ಪತ್ರ ತೆಗೆದುಕೊಳ್ಳಲು ಲಂಚವಿಡುವಂತಾಗಿದೆ ಸ್ವಾಮಿ, ಸತ್ತ ಹೆಣವನ್ನು ಆಸ್ಪತ್ರೆಯಿಂದ ಹೊರತರಬೇಕಾದರೆ ದುಡ್ಡು ಮಡಗಬೇಕು ಸ್ವಾಮಿ, ಯಾರಿಗೆ ಬಂದಿದೆ ಸ್ವಾತಂತ್ರ್ಯ'' ಎನ್ನುತ್ತಾನೆ ಹಳ್ಳಿಯ ಬಂಧು. ಯುವಜನಾಂಗ ಬೆಳೆಯುತ್ತಿದೆ ಟಿ.ವಿ.ಗಳ ಮುಂದೆ ಕುಳಿತು, ಶಾಲಾ ಕಾಲೇಜುಗಳ ಕೇವಲ ವಿಹಾರಧಾಮಗಳಾಗುತ್ತಿವೆ. ಅವರಿಗೆ ಗಂಭೀರ ಚಿಂತನೆ ಇಲ್ಲ. ತಮ್ಮ ಶಿಕ್ಷಕರ ಬಗ್ಗೆ ಆದರವಿಲ್ಲ. ಕಲಿವ ವಿಚಾರಗಳಲ್ಲಿ ಆಸಕ್ತಿಯಿಲ್ಲ, ಹಿರಿಯರ ಬಗ್ಗೆ, ಆದರ್ಶಪುರುಷರಬಗ್ಗೆ, ತಂದೆತಾಯಿಗಳ ಬಗ್ಗೆ ಅಭಿಮಾನ, ಭಕ್ತಿಯಿಲ್ಲ. ರೋಗನಿಧಾನವಾಗಿ ಹಬ್ಬುತ್ತಿದೆ, ಆಲಸ್ಯ, ಆರಾಮ ಜೀವನ ಆಹ್ವಾನಿಸಿದೆ. ಕಾಯಕಷ್ಟವಿಲ್ಲ, ಕರ್ತವ್ಯನಿಷ್ಠೆ ಇಲ್ಲ, ಪ್ರಾಮಾಣಿಕತೆಯಿಂದ ಬದುಕಬೇಕೆಂಬ ಸಂಕಲ್ಪವಿಲ್ಲ. ಸ್ವಾಭಿಮಾನವಂತೂ ಮೊದಲೇ ಇಲ್ಲ. ಇದಕ್ಕೆ ಪರಿಹಾರ ಎಂತು? ಮುಖಂಡರು, ಬುದ್ಧಿಜೀವಿಗಳು ದಾರಿತೋರಬೇಕೀಗ.

– ಸಂಪಾದಕ







# ಮಾನವೀಯತೆ

ನಮ್ಮ ಜೀವನದ ಅಭ್ಯುದಯಕ್ಕಾಗಿ ದುಡಿದವರನ್ನು ಸದಾ ಸ್ಮರಿಸುವುದು ನಿಜವಾದ ಮಾನವೀಯತೆ. ಮಾನವೀಯತೆ ಕೇವಲ ಮನುಷ್ಯವರ್ಗಕ್ಕೆ ಸೀಮಿತವಾಗಿರಬಾರದು. *''ಸಕಲ ಜೀವರಿಗೂ ಲೇಸನೇ ಬಯಸು''*ವಂಥದಾಗಿರಬೇಕು. ಮಾನವೀಯತೆಯ ಪ್ರಮುಖ ಲಕ್ಷಣವೆಂದರೆ ಸ್ಮರಣೆ, ಕೃತಜ್ಞತಾಪೂರ್ವಕವಾದ ಸ್ಮರಣೆ. ನಮ್ಮ ಪೂರ್ವಿಕರು ತಮಗಾಗಿ, ತಮ್ಮ ಏಳಿಗೆಗಾಗಿ ದುಡಿದವರನ್ನು, ಸಹಕರಿಸಿದವರನ್ನು, ಮಾರ್ಗದರ್ಶನ ಮಾಡಿದವರನ್ನು, ಕೈಹಿಡಿದು ನಡೆಸಿದವರನ್ನು, ಸದಾಕಾಲ ನೆನೆಯುತ್ತಿದ್ದರು. ಹಾಗೆ ನೆನೆಯುವ ವರ್ಗದಲ್ಲಿ ಪಶುಗಳು, ಪ್ರಾಣಿಗಳು, ಪಕ್ಷಿಗಳೂ ಸಹ ಇರುತ್ತಿದ್ದವು.

ಅದರಲ್ಲೂ ಪಶುವರ್ಗದ ಬಗ್ಗೆ ಅವರಿಗೆ ಪೂಜ್ಯಭಾವನೆ ಇತ್ತು. ದೇವರೆಂದೇ ಗೌರವಿಸಿ ಅವುಗಳನ್ನು ಸಾಕುತ್ತಿದ್ದರು. ಎತ್ತು, ಹೋರಿ, ಹಸುಗಳೆಂದರೆ ಅವರಿಗೆ ತಮ್ಮ ಮಕ್ಕಳಿದ್ದ ಹಾಗೆ. ತಮಗಾಗಿ ದುಡಿಯುತ್ತಿದ್ದ ಅನಿಸ್ವಾರ್ಥ ಜೀವಗಳನ್ನು ಅವರು ಪ್ರೀತಿಯಿಂದ ಸಂಜೆ-ಮುಂಜಾನೆ, ಹಬ್ಬ, ಜಾತ್ರೆಗಳ ಸಂದರ್ಭದಲ್ಲಿ ಮೈತೊಳೆದು, ಹುಗ್ಗಿ ತಿನಿಸಿ, ಮೇವು ಹಾಕಿ, ನೆರಳಿಗೆ ಕಟ್ಟಿ, ಮೈಯುಜ್ಜಿ, ಆರೈಕೆ ಮಾಡುತ್ತಿದ್ದರು. ಅವುಗಳಿಗೇನಾದರೂ ಅನಾರೋಗ್ಯವಾದರೆ ತಮಗೆ ಅನಾರೋಗ್ಯವಾಯಿತೆಂಬಂತೆ ನೋಯುತ್ತಿದ್ದರು. ಅವುಗಳ ಔಷಧೋಪಚಾರ ನಡೆಸುತ್ತಿದ್ದರು. ಅವು ಹುಳುಮುಟ್ಟದಂತೆ, ಹಸಿರು (ವಿಷದ ಹುಲ್ಲು) ತಿನ್ನದಂತೆ ಎಚ್ಚರವಹಿಸುತ್ತಿದ್ದರು. ಮನೆಯ ಮಗನೆಂಬಂತೆ ಎತ್ತು, ಹೋರಿಗಳನ್ನು ಭಾವಿಸಿದರೆ; ಮಗಳೆಂಬಂತೆ ಹಾಲು ಕೊಡುವ ಹಸುವನ್ನು ಹೆಸರಿಟ್ಟು ಕರೆಯುತ್ತಿದ್ದ ರೀತಿ ನಿಜಕ್ಕೂ ಶ್ಲಾಘನೀಯ. ಅವರೆಂದೂ ತಮ್ಮ ಜೀವಾಭಿವೃದ್ಧಿಗಾಗಿ ದುಡಿದ ಎತ್ತು, ಹೋರಿ, ಹಸುಗಳು ಸತ್ತ ಸಂದರ್ಭದಲ್ಲಿ 'ಸಮಾಧಿ' ಮಾಡುತ್ತಿದ್ದರೇ ಹೊರತು ಕಟುಕರಿಗೆ, ತಿನ್ನುವವರಿಗೆ ಮಾರುತ್ತಿರಲಿಲ್ಲ.

ಪಶುಗಳ ವೃದ್ಧಾಪ್ಯದಲ್ಲಿ ತಮ್ಮ ತಂದೆ ತಾಯಿಗಳನ್ನು ಆರೈಕೆ ಮಾಡುವ ರೀತಿಯಲ್ಲಿ ನೋಡಿಕೊಳ್ಳುತ್ತಿದ್ದ ಪೂರ್ವಿಕರ ಹೃದಯಂತಿಕೆ ದೊಡ್ಡದಾಗಿತ್ತು. ಆದರೆ ಇಂದು ಆಧುನಿಕರಾದ ರೈತಾಪಿವರ್ಗದವರು ಪಶುವರ್ಗದ ವಿಷಯದಲ್ಲಿ ನಡೆದುಕೊಳ್ಳುತ್ತಿರುವ ರೀತಿ ನೀತಿಗಳು ನೋವನ್ನುಂಟುಮಾಡುತ್ತಿವೆ. ಅವುಗಳನ್ನು ತಮಗೆ ಬೇಕಾಗುವವರಿಗೆ ದುಡಿಸಿಕೊಂಡು, ಅವುಗಳಿಗೆ ವಯಸ್ಸಾದಾಗ, ದುಡಿಯಲು ಅಶಕ್ತವೆಂದು ಕಂಡುಬಂದಾಗ ಅವುಗಳನ್ನು ಕಟುಕರಿಗೆ, ಮಾಂಸದ ಮಾರಾಟಗಾರರಿಗೆ ಮಾರುತ್ತಿರುವುದು ಮಾನವೀಯತೆಗೆ ಮಾಡುತ್ತಿರುವ ಘೋರ ಅಪಚಾರವಾಗುತ್ತದೆ. ಹೆತ್ತ ತಂದೆ ತಾಯಿಗಳನ್ನೇ ಮಾರಿದಂತೆನಿಸುತ್ತದೆ. ''ಹಾದಿಬೀದಿಯಲ್ಲಿರುವ ಕಸದ ಹುಲ್ಲನ್ನು ಹುಡುಕಿ ಮೇದು ಮನೆಗೈದಿ ಅಮೃತವ ನೀಡುವ'' ಮುಗ್ಧ, ಮೂಕ ಪ್ರಾಣಿಗಳ ಮೇಲೆ ಮಾಡುತ್ತಿರುವ ಅತ್ಯಾಚಾರವೆನಿಸುತ್ತದೆ. ದುಡಿದು ಮುಪ್ಪಾದ ಪ್ರಾಣಿಗಳು ''ತಬ್ಬಲಿಯು ನೀನಾದೆ''ಯಲ್ಲಾ ಎಂದೆನಿಸುತ್ತದೆ, ಎದೆ ಭಾರವಾಗುತ್ತದೆ.

ಜಾತ್ರಾ ಸಂದರ್ಭಗಳಲ್ಲಂತೂ ವಯಸ್ಸಾದ ದನಗಳ ಮಾರಾಟವನ್ನು ಮಾಂಸಾಹಾರಾರ್ಥವಾಗಿ ನಡೆದಿರುವ 'ದಂಧೆ'ಯನ್ನು ನಿಲ್ಲಿಸುವುದಾದರೂ ಹೇಗೆ? ಎಂದೆನಿಸುತ್ತದೆ ***''ದಯವೇ ಧರ್ಮದ ಮೂಲವಯ್ಯಾ''*** – ಎಂಬ ಬಸವಣ್ಣನವರ ಮಾತಿನ ಸತ್ಯದ ದರ್ಶನ ನಾಗರಿಕ ಜನರಿಗೆ ಆಗುವ ಅನಿವಾರ್ಯತೆ ಇದೆ. ಪಶುಗಳು, ಪ್ರಾಣಿಗಳು ಬಾಯಿತೆರೆದು ತಮ್ಮ ನೋವನ್ನು ಹೇಳಿಕೊಳ್ಳಲಾರದ ಸ್ಥಿತಿಯ ದುರುಪಯೋಗವನ್ನು ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿರುವ ಮಾನವನ ಹೇಯ ಪ್ರವೃತ್ತಿಯನ್ನು ಖಂಡಿಸಲೇಬೇಕಾಗಿದೆ. ಪರಹಿತಕ್ಕಾಗಿ ದುಡಿಯುವ ಮುಗ್ಧಪ್ರಾಣಿಗಳ ಮಾರಾಟ, ಹತ್ಯೆಯಂಥ ಕ್ರೂರ ಪದ್ಧತಿ ನಿಲ್ಲಬೇಕು. ಧರ್ಮ ಉಪನ್ಯಾಸದ, ಪ್ರವಚನದ, ಉಪದೇಶದ ವಸ್ತುವಾಗಬಾರದು. ಅದು ಆಚರಣೆಯಲ್ಲಿ ವ್ಯಕ್ತವಾಗಬೇಕು. **''ತನ್ನಂತೆ ಪರರ ಬಗೆವ ಬಿನ್ನಾಣ''**ವಾಗಬೇಕು.

(೧೫.೨.೨೦೦೧ರಂದು ಶ್ರೀಮಠದ ಜಾತ್ರೆ ಸಂದರ್ಭ ಧರ್ಮಗೋಷ್ಠಿಯಲ್ಲಿ ನೀಡಿದ ಆಶೀರ್ವಚನದಿಂದ ಆಯ್ದ ಭಾಗ).

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ನರರಂತೆ ನಡೆಯುತ್ತಿಪ್ಪಿರಿ, ನರರಂತೆ ನುಡಿವುತಿಪ್ಪಿರಿ ಆಯ್ಯಾ*
*ನರರಂತೆ ಉಣುತಿಪ್ಪಿರಿ, ನರರಂತೆ ಉಡುತಿಪ್ಪಿರಿ ಅಯ್ಯಾ*
*ನೋಡಿದರೆ ಅವರವರಂತಿಪ್ಪಿರಿ, ವಿಚಾರಿಸಿದರೆ*
*ನೀವು ನಿಮ್ಮಂತೆ ಇಪ್ಪಿರಿ ಅಯ್ಯಾ*

*ಹತ್ತರೊಳಗೆ ಹನ್ನೊಂದಾಗಿಪ್ಪಿರಿ ಅಯ್ಯಾ*
*ಕುರುಹಿನ ನಾಮವಿಡಿದು ಕರೆದರೆ ಓ ಎಂದೆಂಬಿರಿ*
*ನಾಮವಿಲ್ಲದ ಸೀಮೆಯಿಲ್ಲದ ನಿಸ್ಸೀಮ ಲಿಂಗೈಕ್ಯನಯ್ಯ*
*ಮಹಾಲಿಂಗಗುರು ಶಿವಸಿದ್ದೇಶ್ವರ ಪ್ರಭುವೇ !*

ಶರಣನು ಲಿಂಗದೊಡನೆ ಒಂದಾಗಿದ್ದಾಗಲೂ ಆತನು ಸಾಮಾನ್ಯ ಜನರಂತೆ ನಡೆವ, ನುಡಿವ, ಉಣುವ, ಉಡುವ ವ್ಯವಹಾರದಲ್ಲಿ ಎಷ್ಟೂ ವ್ಯತ್ಯಾಸವಾಗದಂತೆ ತೋರುವನು. ಶರಣನು ಅವರವರಿಗೆ ಅವರವರಂತೆ ಕಂಡರೂ ತಾನು ತನ್ನಂತೆಯೇ ಇರುವನು. ತಾನು ನಾಮ ಸೀಮೆಗಳನ್ನು ಮೀರಿದವನಾಗಿದ್ದರೂ ಹೆಸರುಗೊಂಡು ಕರೆದರೆ 'ಓ' ಎಂದು ಉತ್ತರಿಸುವನು. ಶರಣನ ಅಂತರಂಗ ಜೀವನದಲ್ಲಿ ಮಾತ್ರ ವ್ಯತ್ಯಾಸವಾಗಿರುವುದಲ್ಲದೆ ಬಹಿರಂಗ ಜೀವನದಲ್ಲಿ ಎಷ್ಟೂ ವ್ಯತ್ಯಾಸ ತೋರುವುದಿಲ್ಲ. ***''ಅರಿದೊಡೆ ಶರಣ ಮರೆದೊಡೆ ಮಾನವ''*** ಎಂಬ ಮಾತನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

(ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ –
ಶ್ರೀ ತೋಂ.ಸಿ.ಕೈಂ.ಸೇ. ಸಂಘ, ಎಡೆಯೂರು – ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಭಾವವಿರಹಿತಗುರುವೆ ನಿರ್ಲಿಪ್ತ ನಿಷ್ಕಳವೆ
ಆತ್ಮಭಾವಾಕಾಶ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಸ್ಸಂಗ ನಿಶ್ಛೇದ್ಯ ನಿರ್ದಾಹ್ಯ ನಿಕ್ಲೇದ್ಯ
ನಿತ್ಯ ನಿರಂಜನ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿರ್ದೇಹಿ ನಿರ್ಭಾವಿ ನಿರ್ವ್ಯಸನ ನಿರ್ಮಲವೆ
ನಿತ್ಯಮಂಗಳ ನಿಜದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನಾದಿ ಸದ್ರೂಪವೆ ನಿಷ್ಕಲ ಚಿದ್ರೂಪವೆ
ನಿತ್ಯನೀಲಾಂಜನ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಶ್ಚಿಂತ ನಿರ್ಮಮ ನಿರಾಮಯ ನಿರ್ಗುಣ
ನಿರವಯ ನಿರ್ವರ್ಣ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭುವನದ ಭಾಗ್ಯವೆ ನಾಡಿನ ಪುಣ್ಯವೆ
ಕರ್ತಾರನ ಕಮ್ಮಟದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬದ್ಧರಾಹಿತ್ಯನೆ ಬುದ್ಧ ಶ್ರೀ ಚರಿತನೆ
ಶುದ್ಧ ಸಿದ್ಧಿಯ ಶ್ರೀ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮಾನಂದದಿ ಚರಿಪ ಅನುಪಮ ರೂಪವೆ
ಆತ್ಮಾನುಭಾವದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರು ಕೃಪೆಯಾಗು ॥

ನುಡಿ ವಚನ ಲಿಂಗವೆ ನಡೆ ಹೆಜ್ಜೆ ಜಂಗಮವೆ
ನುಡಿನಡೆಯ ಪಾವನ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಮ ಸೀಮೆಯ ದಾಟಿ ರೂಪು ನಿರೂಪಾದ
ಕಾರ್ಯಕಾರಣನೆನದ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಶ್ರೀ ಗುರುವಂದನ ಮಹೋತ್ಸವ

ದಿನಾಂಕ ೧-೪-೨೦೦೧ ಸಮಯ : ಬೆಳಿಗ್ಗೆ ೧೦.೦೦ ಘಂಟೆ

### ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ
### ೯೪ನೇ ಜನ್ಮದಿನೋತ್ಸವ ಸಮಾರಂಭ

*ದಿವ್ಯ ಅಧ್ಯಕ್ಷತೆ* : **ಶ್ರೀ ಮ.ನಿ.ಪ್ರ. ಸ್ವ ಶ್ರೀ ಶ್ರೀ ಗಂಗಾಧರಮಹಾಸ್ವಾಮಿಗಳು**
ಜಗದ್ಗುರು, ಶಾಖಾ ಮೂರು ಸಾವಿರ ಮಠ, ಬೈಲಹೊಂಗಲ ಬೆಳಗಾವಿ ಜಿಲ್ಲೆ

*ಉದ್ಘಾಟನೆ* : **ಘನತೆವೆತ್ತ ಶ್ರೀಮತಿ ವಿ.ಎಸ್. ರಮಾದೇವಿರವರು**, ರಾಜ್ಯಪಾಲರು, ಕರ್ನಾಟಕ ರಾಜ್ಯ

*ಭಕ್ತಿ ಸಮರ್ಪಣೆ* : **ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು**, ಕಿರಿಯ ಶ್ರೀಗಳು, ಶ್ರೀ ಸಿದ್ಧಗಂಗಾ ಮಠ

*ಸಮುದಾಯ ಭವನದ ಶಿಲಾನ್ಯಾಸ* : **ಸನ್ಮಾನ್ಯ ಶ್ರೀ ಅನಂತಕುಮಾರ್**
ಸಂಸ್ಕೃತಿ ಮತ್ತು ಪ್ರವಾಸೋದ್ಯಮ ಸಚಿವರು, ಭಾರತ ಸರ್ಕಾರ

*ನೂತನ ಅತಿಥಿ ಗೃಹ ಕಟ್ಟಡದ ಪ್ರಾರಂಭ* : **ಸನ್ಮಾನ್ಯ ಶ್ರೀ ಮಲ್ಲಿಕಾರ್ಜುನ ಖರ್ಗೆ**
ಗೃಹ ಸಚಿವರು, ಕರ್ನಾಟಕ ಸರ್ಕಾರ

*ಮುಖ್ಯ ಅತಿಥಿಗಳು* : **ಸನ್ಮಾನ್ಯ ಡಾ ॥ ಎ.ಬಿ. ಮಲಕರೆಡ್ಡಿ**, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು, ಕರ್ನಾಟಕ ಸರ್ಕಾರ
**ಸನ್ಮಾನ್ಯ ಶ್ರೀ ಟಿ. ಬಿ. ಜಯಚಂದ್ರ**, ಕೃಷಿ ಸಚಿವರು, ಕರ್ನಾಟಕ ಸರ್ಕಾರ
**ಸನ್ಮಾನ್ಯೆ ಶ್ರೀಮತಿ ರಾಣಿ ಸತೀಶ್**, ಕನ್ನಡ ಮತ್ತು ಸಂಸ್ಕೃತಿ ಸಚಿವರು, ಕರ್ನಾಟಕ ಸರ್ಕಾರ
**ಸನ್ಮಾನ್ಯ ಡಾ ॥ ಜಿ. ಪರಮೇಶ್ವರ್**, ಉನ್ನತ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ
**ಸನ್ಮಾನ್ಯ ಪ್ರೊ. ಬಿ.ಕೆ. ಚಂದ್ರಶೇಖರ್**, ವಾರ್ತಾ ಸಚಿವರು, ಕರ್ನಾಟಕ ಸರ್ಕಾರ
**ಸನ್ಮಾನ್ಯ ಶ್ರೀ ಆರ್.ಎಲ್. ಜಾಲಪ್ಪ**, ಲೋಕಸಭಾ ಸದಸ್ಯರು, ಚಿಕ್ಕಬಳ್ಳಾಪುರ
**ಸನ್ಮಾನ್ಯ ಶ್ರೀ ಜಿ.ಎಸ್. ಬಸವರಾಜು**, ಲೋಕಸಭಾ ಸದಸ್ಯರು, ತುಮಕೂರು
**ಸನ್ಮಾನ್ಯ ಶ್ರೀ ಜಿ. ಪುಟ್ಟಸ್ವಾಮಿಗೌಡ**, ಲೋಕಸಭಾ ಸದಸ್ಯರು, ಹಾಸನ
**ಸನ್ಮಾನ್ಯ ಶ್ರೀ ಶಶಿಕುಮಾರ್**, ಲೋಕಸಭಾ ಸದಸ್ಯರು, ಚಿತ್ರದುರ್ಗ

*ಸನ್ಮಾನ* : **ಶ್ರೀ ಗೋಪಾಲ್ ಶ್ರೀನಿವಾಸನ್**, ನಿರ್ದೇಶಕರು, ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್ ಲಿಮಿಟೆಡ್
ಹಿರೇಹಳ್ಳಿ, ತುಮಕೂರು
**ಡಾ॥ ಎಂ.ಎಂ. ಕಲಬುರ್ಗಿ**, ಮಾಜಿ ಉಪಕುಲಪತಿಗಳು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
**ಶ್ರೀ ಬಲವಂತ್ ಸಿಂಹ**, ಅಧ್ಯಕ್ಷರು, ರಾಜಪುರೋಹಿತ್ ಸಮಾಜ, ಅಕ್ಕಿಪೇಟೆ, ಬೆಂಗಳೂರು
**ಯಜಮಾನ್ ಶ್ರೀ ಚಿಕ್ಕವೀರಪ್ಪ**, ರಘುವನಹಳ್ಳಿ, ಕನಕಪುರ ರಸ್ತೆ, ಬೆಂಗಳೂರು

*ಆಶೀರ್ವಚನ* : **ಪರಮ ಪೂಜ್ಯ ಶ್ರೀಗಳವರು**

## ವಿಶೇಷ ಆಹ್ವಾನಿತರು

**ಶ್ರೀಮತಿ ದಾಕ್ಷಾಯಣಮ್ಮ ಅಶ್ವತ್ಥ್**
ಅಧ್ಯಕ್ಷರು, ಜಿಲ್ಲಾಪಂಚಾಯತ್, ತುಮಕೂರು

ಸನ್ಮಾನ್ಯ ಶಾಸಕರುಗಳಾದ ಸರ್ವಶ್ರೀ

**ಹೆಚ್.ಎಂ. ರೇವಣ್ಣ**, ಮಾಗಡಿ,
**ವಿ. ಸೋಮಣ್ಣ**, ಬೆಂಗಳೂರು
**ವೈ.ಕೆ. ರಾಮಯ್ಯ**, ಹುಲಿಯೂರುದುರ್ಗ
**ಎಸ್.ಪಿ. ಮುದ್ದಹನುಮೇಗೌಡ**, ಕುಣಿಗಲ್
**ಆರ್. ನಾರಾಯಣ್**, ಬೆಳ್ಳಾವಿ
**ಎಸ್. ಶಿವಣ್ಣ**, ತುಮಕೂರು
**ಸಿ. ಚನ್ನಿಗಪ್ಪ**, ಕೊರಟಗೆರೆ
**ಕೆ. ಷಡಕ್ಷರಿ**, ತಿಪಟೂರು
**ಎಸ್. ವೀರಣ್ಣಗೌಡ**, ಗುಬ್ಬಿ
**ಸಿ.ಬಿ. ಸುರೇಶ್‌ಬಾಬು**, ಚಿಕ್ಕನಾಯಕನ ಹಳ್ಳಿ
**ವೆಂಕಟರಮಣಪ್ಪ**, ಪಾವಗಡ
**ಪಿ.ಎಂ. ರಂಗನಾಥಪ್ಪ**, ಶಿರಾ
**ಎಂ.ಡಿ. ಲಕ್ಷ್ಮೀ ನಾರಾಯಣ**, ತುರುವೇಕೆರೆ
**ಎಸ್. ಚನ್ನಬಸವಯ್ಯ**, ತುಮಕೂರು
**ಡಿ.ಎಲ್. ಜಗದೀಶ್**, ತುಮಕೂರು
**ಕೆ.ಎನ್. ರಾಜಣ್ಣ**, ತುಮಕೂರು
**ಡಾ|| ಶಿವಯೋಗಿ ಸ್ವಾಮಿ**, ದಾವಣಗೆರೆ

**ಪಂಚಾಕ್ಷರಯ್ಯ**
ಅಧ್ಯಕ್ಷರು, ಎ.ಪಿ.ಎಂ.ಸಿ. ತುಮಕೂರು

## ಸಾಹಿತ್ಯ ಸಮ್ಮೇಳನ

**ದಿನಾಂಕ ೧-೪-೨೦೦೧** **ಸಮಯ : ೪.೦೦ ಘಂಟೆ**

ದಿವ್ಯಸಾನ್ನಿಧ್ಯ : **ಶ್ರೀ ಮ.ನಿ.ಪ್ರ.ಸ್ವ ಶ್ರೀ ಶ್ರೀ ಗಂಗಾಧರಮಹಾಸ್ವಾಮಿಗಳು**
ಜಗದ್ಗುರು ಶಾಖಾ ಮೂರುಸಾವಿರ ಮಠ, ಬೈಲಹೊಂಗಲ, ಬೆಳಗಾವಿ ಜಿಲ್ಲೆ

ಉದ್ಘಾಟನೆ : **ಶ್ರೀಮತಿ ರಾಣಿ ಸತೀಶ್**, ಕನ್ನಡ ಮತ್ತು ಸಂಸ್ಕೃತಿ ಸಚಿವೆ, ಕರ್ನಾಟಕ ಸರ್ಕಾರ

ಅಧ್ಯಕ್ಷತೆ : **ಡಾ || ಎಂ.ಎಂ. ಕಲಬುರ್ಗಿ**, ಮಾಜಿ ಉಪಕುಲಪತಿಗಳು, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ

ಉಪನ್ಯಾಸ : **ವಿಷಯ : ಆಧುನಿಕ ಜಗತ್ತಿಗೆ ಶರಣಸಾಹಿತ್ಯದ ಕೊಡುಗೆ**

ಆಶೀರ್ವಚನ : **ಶ್ರೀ ಮ.ನಿ.ಪ್ರ.ಸ್ವ ಡಾ || ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು**, ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ

## ಸಾಂಸ್ಕೃತಿಕ ಕಾರ್ಯಕ್ರಮ

೧. ವಿದ್ವಾನ್ ಸಾಯಿನಾಥ ಮತ್ತು ಸಂಗಡಿಗರು , ಮಂಗಳೂರು ಇವರಿಂದ
ಸ್ಯಾಕ್ಸೋ ಫೋನ್ ಸಂಗೀತ ಕಾರ್ಯಕ್ರಮ
೨. ಶ್ರೀಮಠದ ಕಲಾವಿದರಿಂದ ನಾಟಕ

ತಮ್ಮ ಆಗಮನಾಭಿಲಾಷಿಗಳು
**ಗುರುವಂದನಾ ಸಮಿತಿ ಮತ್ತು ಭಕ್ತ ಮಂಡಳಿ**
ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ – ೫೭೨ ೧೦೪







# ಯೌವ್ವನ

– ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು - ೮೨

ಧೈರ್ಯ, ಸಾಹಸ, ಸಹವಾಸ, ಅಭ್ಯಾಸ, ಆತ್ಮವಿಶ್ವಾಸ ಮತ್ತು ಸ್ವಾತಂತ್ರ್ಯಗಳಿಗೆ ಒಂದು ಮೊತ್ತದ ಹೆಸರು ಯೌವ್ವನ. ಅಂದರೆ, ಯೌವ್ವನದಲ್ಲಿ ಇವೆಲ್ಲ ಇರುತ್ತವೆ ಮತ್ತು ಇರಬೇಕು ಎಂದರ್ಥ. ಮಾನವ ಜೀವನದ ಒಂದು ಮಹತ್ವದ ಹಂತ ಯೌವ್ವನ. ಎಳೆತನದ ಮುಗ್ಧತೆಯನ್ನು ದಾಟಿ, ಹಿರಿತನದ ಹೊಸಿತಲಿನತ್ತ ನಡೆಯುವ ಬೆಲೆಬಾಳುವ ಸಮಯ. ಕಂಡು ಕೇಳಿದ್ದನ್ನೆಲ್ಲ ಪ್ರಶ್ನಿಸುವ, ಪರೀಕ್ಷಿಸುವ ಮತ್ತು ಪ್ರಯೋಗಿಸುವ ಹುಚ್ಚಿನ ಕಾಲ. ಒಪ್ಪಿಗೆಯಾದರೆ ಅಪ್ಪಿಕೊಳ್ಳುವ, ಹಿಡಿಸದಿದ್ದರೆ ಸಿಡಿದಿಬೀಳುವ ಸಹಜ ಸಂದರ್ಭ.

ಯೌವ್ವನ ಅತ್ಯಂತ ಸೂಕ್ಷ್ಮ ಅವಧಿಯೂ ಹೌದು. ಅನ್ಯಾಯ, ಅಸಹ್ಯ, ಅಸಮತೆಗಳ ವಿರುದ್ಧಹೋರಾಡಬಯಸುವ ಈ ವಯಸ್ಸು, ಒಮ್ಮೊಮ್ಮೆ ಭಾವೋದ್ವೇಗದ ಭರದಲ್ಲಿ ಹಳಿತಪ್ಪಿ ತಾನೇ ಅಂತಹ ಅನ್ಯಾಯ ಅಸಹ್ಯಗಳಿಗೆ ಕಾರಣವಾಗಲೂ ಬಹುದು. ಆದ್ದರಿಂದ ಯೌವ್ವನವನ್ನು ಅತ್ಯಂತ ಜಾಗರೂಕತೆಯಿಂದ ಹದಗೊಳಿಸಬೇಕಾಗುತ್ತದೆ. ಹಾಗೆ ಹದಗೊಳಿಸಿಬಿಟ್ಟರೆ, ಯೌವ್ವನ ಹೂವಿಗೆ ಹೂವಾಗುತ್ತದೆ; ಉಕ್ಕಿಗೆ ಉಕ್ಕಾಗುತ್ತದೆ !

ಯುವಜನಾಂಗ ಸಮಾಜದ ಅತ್ಯದ್ಭುತ ಸಂಪತ್ಸಾಧನ. ಯಾವಾಗ? ಅವರ ಉತ್ಸಾಹ ಉಪಕ್ರಮ ಮತ್ತು ಉತ್ಪಾದನ ಶಕ್ತಿಯನ್ನು ಸರಿಯಾಗಿ, ಸಕಾಲಿಕವಾಗಿ, ಸಮರ್ಥವಾಗಿ ಬಳಸಿಕೊಂಡಾಗ. ಯೌವ್ವನದ ಶಕ್ತಿಸಾಹಸಗಳು, ಆಸೆ-ಆಕಾಂಕ್ಷೆಗಳು ಒಂದು ಪ್ರವಾಹವಿದ್ದಂತೆ. ಯೋಗ್ಯ ಅಣೆಕಟ್ಟುನಿರ್ಮಿಸಿ, ಸೂಕ್ತ ನಾಲೆಗಳಲ್ಲಿ ಹರಸದಿದ್ದರೆ ಈ ಪ್ರವಾಹ ಹುಚ್ಚೆದ್ದು ಹರಿಯುತ್ತದೆ; ತನ್ನ ಹಾದಿಯಲ್ಲಿ ಸಿಕ್ಕಿದುದನ್ನೆಲ್ಲ ಕೊಚ್ಚಿಕೊಂಡು ಹೋಗಿಬಿಡುತ್ತದೆ.

ಯುವಶಕ್ತಿಯ ಪ್ರವಾಹಕ್ಕೆ ಅಣೆಕಟ್ಟು ಹಾಕುವ ಕೆಲಸವೂ ಸಾಮಾನ್ಯವಲ್ಲ. ಅದಕ್ಕೆ ವಿಶಿಷ್ಟವಾದ 'ಇಂಜಿನಿಯರಿಂಗ್ ಸ್ಕಿಲ್' ಬೇಕಾಗುತ್ತದೆ. ಯುವಶಕ್ತಿಯ ಸ್ವಭಾವ ಮತ್ತು ಪ್ರವೃತ್ತಿಗಳನ್ನು ಅರ್ಥಮಾಡಿಕೊಂಡ ಮನೋವಿಜ್ಞಾನಿಯೇ ಈ ಕೆಲಸ ಮಾಡಬೇಕು.

ಇಂದಿನ ಯುವಜನಾಂಗ ಹಿಂದಿನಂತಲ್ಲ. ಅವರು ಹೆಚ್ಚು ಜಾಗೃತರು. ಹೊಸ ವಿಚಾರಗಳ ಅಧ್ಯಯನಕ್ಕೆ ಅವರಿಗಿರುವಷ್ಟು ಅವಕಾಶ ಹಿಂದಿವರಿಗಿರಲಿಲ್ಲ. ಆಧುನಿಕ ಸಂಪರ್ಕ ಮಾಧ್ಯಮಗಳ ಅದ್ಭುತ ಸವಲತ್ತು ಅವರಿಗಿದೆ. ಯುವಜನರ ಬೌದ್ಧಿಕ ಮತ್ತು ಭೌತಿಕ ಬೆಳವಣಿಗೆಗೆ ಅಗತ್ಯವಾದ ಸಮೃದ್ಧ ಅವಕಾಶಗಳೆ ಈಗ ಇವೆ.

ನಮ್ಮ ಯುವಜನಾಂಗ ತಮಗೆ ದೊರೆತಿರುವ ಈ ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕು. ಹಿರಿಯವರಾದವರಿಂದ ಯೋಗ್ಯ ಮಾರ್ಗದರ್ಶನಪಡೆದುಕೊಳ್ಳಬೇಕು. ಯುವಜನರ ಅರ್ಥಪೂರ್ಣ ಆಸೆ ಆಕಾಂಕ್ಷೆಗಳು ಈಡೇರಲು ಅಗತ್ಯವಾದ ಮತ್ತು ಪೂರಕವಾದ ಸನ್ನಿವೇಶಗಳನ್ನು ಹಿರಿಯರಾದವರೂ ಕಲ್ಪಿಸಿಕೊಡಬೇಕು. ನಾನು ಮೊದಲೇ ಹೇಳಿದಂತೆ, ಯುವಜನರ ಮನಸ್ಸು ಎಷ್ಟು ಪ್ರಬಲವೋ, ಒಮ್ಮೊಮ್ಮೆ ಅಷ್ಟೇ ದುರ್ಬಲವಾಗಿಬಿಡುವುದೂ ಉಂಟು. ಆದ್ದರಿಂದ ಮಾರ್ಗದರ್ಶಕರು ತುಂಬಾ ಎಚ್ಚರವಹಿಸಬೇಕು.

ಯೌವ್ವನದ ಮುಂದೆ ಇಬ್ಬರು ಕನ್ಯೆಯರು ಬಂದು ನಿಲ್ಲುತ್ತಾರಂತೆ. ವಯೋಧರ್ಮದ ಅನುಗುಣವಾಗಿ ಕನ್ಯೆಯ ಕೈಹಿಡಿಯುವುದು ಸಹಜ. ಆದರೆ ಯಾವ ಕನ್ಯೆಯ ಕೈಹಿಡಿಯಬೇಕೆಂಬ ಗೊಂದಲಕ್ಕೆ ಸಿಕ್ಕಿಕೊಳ್ಳುತ್ತಾನೆ ಯುವಕ. ಇಬ್ಬರೂ ಅವನಲ್ಲಿ ಪ್ರೇಮಭಿಕ್ಷೆ ಬೇಡುತ್ತಾರೆ. ಒಬ್ಬಳು ದೃಢ ಮನಸ್ಸನ್ನು ಬೇಡಿದರೆ, ಇನ್ನೊಬ್ಬಳು ಅವನ ದೃಢ ದೇಹವನ್ನು ಬಯಸುತ್ತಾಳೆ. ವಿವೇಚನೆಯುಳ್ಳ ಯುವಕ ಮಾತ್ರ ದೃಢ ಮನಸ್ಸನ್ನು ಬೇಡುವ ಕನ್ಯೆಯ ಕೈಹಿಡಿಯುತ್ತಾನೆ. ಮನೋದೌರ್ಬಲ್ಯವುಳ್ಳವನು ಇನ್ನೊಬ್ಬಳ ಕೈಹಿಡಿದು, ತನ್ನ ದೃಢ ದೇಹವನ್ನು ಕಳೆದುಕೊಳ್ಳುತ್ತಾನೆ.



ಇಲ್ಲಿ ಬರುವ ಮೊದಲನೆ ಕನ್ಯೆ ಸಂಕಲ್ಪ, ಎರಡನೆಯವಳು ವಿಕಲ್ಪ. ಸಂಕಲ್ಪದ ಕೈಹಿಡಿದರೆ ಸತ್ಕೀರ್ತಿ, ಹರ್ಷ, ಸನ್ಮಾನ, ವಿಕಲ್ಪದ ಕೈಹಿಡಿದರೆ ದುಷ್ಕೀರ್ತಿ, ದುಃಖ, ದುಮ್ಮಾನ.

ಯೌವ್ವನ ಎನ್ನುವುದು ಮಾನವನ ಬಾಳಿನಲ್ಲಿ ಒಮ್ಮೆ ದಾಟಿದರೆ ಮತ್ತೆ ಬಾರದ ಅವಧಿ. ಈ ಅವಧಿಯನ್ನು ದುರ್ವ್ಯಯ ಮಾಡಿ ಪಶ್ಚಾತ್ತಾಪಪಟ್ಟರೆ ಪ್ರಯೋಜನವಿಲ್ಲ. ಈ ಅವಧಿಯ ಒಂದೊಂದು ನಿಮಿಷವೂ ಮಹತ್ವದ್ದು. ಮೇಲಾಗಿ ಯೌವ್ವನದ ಅವಧಿಯೇನೂ ದೀರ್ಘವಲ್ಲ. ನಾವು ಬೇಡವೆಂದರೂ ವಾರ್ಧಕ್ಯ, ಮುಪ್ಪುಗಳು ನಮ್ಮನ್ನು ತಮ್ಮ ಬುಟ್ಟಿಗೆ ಹಾಕಿಕೊಂಡು ಬಿಡುತ್ತವೆ.

ಆದ್ದರಿಂದ ಯುವಜನರು ಶ್ರದ್ಧಾಪೂರ್ಣ ಅಧ್ಯಯನ, ಉತ್ಸಾಹಪೂರ್ಣ ಆಟೋಟಗಳು, ಅಷ್ಟೇ ಮುಖ್ಯವಾದ ಸತ್ಸಹವಾಸ, ಸದಭ್ಯಾಸಗಳ ಮೂಲಕ ಅನನ್ಯ ಶಕ್ತಿ ಸಾಮರ್ಥ್ಯಗಳನ್ನು ಮೈಗೂಡಿಸಿಕೊಳ್ಳಬೇಕು. ಈ ಶಕ್ತಿ ಸಾಮರ್ಥ್ಯಗಳು ಸುತ್ತಣ ಸಮಾಜದ ಕ್ಷೇಮಾಭ್ಯುದಯಕ್ಕೆ ವಿನಿಯೋಗವಾಗಬೇಕು.

ಯೌವನಕ್ಕೆ ಮನ್ನಣೆಯ ದಾಹ ಸಹಜ. ಎಂತಲೇ, ಅದಕ್ಕೆ ಏನೇ ತೊಂದರೆಯಿದ್ದರೂ ಸಾಹಸದ ಸಮುದ್ರದಲ್ಲೇ ಈಜಾಡಬೇಕೆಂಬ ಹುಮ್ಮಸು. ಅಂತಹ ಸಾಹಸಕ್ಕೆ ಯಶಸ್ಸು ಕಟ್ಟಿಟ್ಟ ಬುತ್ತಿಯೇನೋ ನಿಜ. ಆದರೆ ಯೌವ್ವನವನ್ನು ಸರಿಯಾಗಿ ಅರ್ಥಮಾಡಿಕೊಂಡು ಬಳಸಬೇಕು. ಹಾಗೆ ಬಳಸಿದರೆ ಅದು ಹೆಸರಿನ ಶಿಖರಕ್ಕೆ ಹತ್ತಿಸುತ್ತದೆ. ಇಲ್ಲವಾದರೆ ಕೆಸರಿನ ಪ್ರಪಾತಕ್ಕೆ ತಳ್ಳಿಬಿಡುತ್ತದೆ !

❀

## ಸಂತಾಪ ಸಂದೇಶ



ರಾಜ್ಯದ ರಾಜಕೀಯದಲ್ಲಿ ಸಕ್ರಿಯ ಪಾತ್ರವಹಿಸಿ ಸಚಿವರಾಗಿ, ಶಾಸಕರಾಗಿ ಸೇವೆ ಸಲ್ಲಿಸಿದ ಸರಳ ಸ್ವಭಾವದ ಡಾ|| ಜೀವರಾಜ ಆಳ್ವ ಅವರು ನಿಧನರಾದುದನ್ನು ತಿಳಿದು ಅತೀವ ವ್ಯಥೆಯಾಯಿತು ಯುವ ನಾಯಕರಾಗಿ ಅತ್ಯುತ್ಸಾಹದಿಂದ ಜನ ಸೇವೆಯಲ್ಲಿ ತೊಡಗಿರುತ್ತಿದ್ದ ಆಳ್ವಾರವರು ಶ್ರೀಮಠದೊಂದಿಗೆ ಮಧುರ ಭಾಂದವ್ಯವನ್ನು ಬೆಳೆಸಿಕೊಂಡು ಬಂದಿದ್ದರು. ಹಲವಾರು ಸಂದರ್ಭಗಳಲ್ಲಿ ಶ್ರೀಮಠದ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದರ ಮೂಲಕ ತಮ್ಮ ಭಕ್ತಿ ವಿಶ್ವಾಸಗಳನ್ನು ವ್ಯಕ್ತಪಡಿಸಿದರು. ಸಂಸ್ಥೆಯ ಸೇವೆಯ ಬಗ್ಗೆ ಶ್ರೀಯುತರಿಗೆ ಅಪಾರ ಅಭಿಮಾನವಿತ್ತು ಡಾ || ಆಳ್ವಾರವರ ಅಗಲಿಕೆಯಿಂದ ಅಪಾರ ನಷ್ಟವುಂಟಾಗಿದೆ.

ಆಗಲಿದ ಶ್ರೀಯುತರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನು ಕೋರಲೆಂದು ಆಶಿಸುತ್ತಾ ಹಾಗೂ ಅವರ ಕುಟುಂಬವರ್ಗದವರಿಗೆ ಶ್ರೀಯುತರ ಅಗಲಿಕೆಯಿಂದ ಉಂಟಾದ ದುಃಖವನ್ನು ಭರಿಸುವ ಶಕ್ತಿಯನ್ನು ಅನುಗ್ರಹಿಸಲೆಂದು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಸಂತಾಪ ಸಂದೇಶದಲ್ಲಿ ತಿಳಿಸಿದ್ದಾರೆ.

## ಶ್ರೀಮಠದ ದಾಸೋಹಕ್ಕೆ ಬಳ್ಳಾರಿ ಜಿಲ್ಲೆಯ ಭಕ್ತರ ಕೊಡುಗೆ

ಶ್ರೀಮಠದ ದಾಸೋಹಕ್ಕೆ ಬಳ್ಳಾರಿ ಜಿಲ್ಲೆಯ ಕಸಬಾ ಮತ್ತು ಸಿರಗುಪ್ಪ ತಾಲ್ಲೂಕಿನ ಈ ಕೆಳಕಂಡ ಗ್ರಾಮಗಳ ಭಕ್ತರು, ಅಭಿಮಾನಿಗಳು 750 ಮೂಟೆ ಭತ್ತ ಶೇಖರಿಸಿ ಕಳುಹಿಸಿದ್ದಾರೆ.

ದಾಸೋಹ ಕಾರ್ಯದಲ್ಲಿ ಭಾಗಿಗಳಾದ ಪುಣ್ಯ ಗ್ರಾಮಗಳು :

1) ಬಿ.ಡಿ. ಹಳ್ಳಿ,
2) ಎರೆಗುಡಿ
3) ಗೋಣಾಳ್
4) ಗೋಟೂರು
5) ಕರೂರು
6) ತಾಳೂರು
7) ಹೆಚ್. ಹೊಸಹಳ್ಳಿ
8) ಹಾಗಲೂರು
9) ಉಪ್ಪಾರ ಹೊಸಹಳ್ಳಿ
10) ಹಳ್ಳಿಗನೂರು
11) ಚಾಣಕನೂರು
12) ರಾರಾವಿ
13) ಹಳೇಕೋಟೆ
14) ದಾಸಾಪುರ
15) ಶ್ಯಾನ್‌ವಾಸಪುರ

**ಶ್ರೀವಾಣಿ**

ಶ್ರೀಮಠದಲ್ಲಿ ಆಶ್ರಯ ಪಡೆದಿರುವ ಅದೆಷ್ಟೋ ಮಕ್ಕಳಿಗೆ ಹಾಸಿಕೊಳ್ಳಲು ಹಾಸಿಗೆ ಬೇಡ ಚಾಪೆ ಕೂಡ ಗತಿಯಿಲ್ಲ. ಹೊದಿಯಲು ಒಂದು ಹಚ್ಚಡ ಅಂದರೆ ಬೆಡ್‌ಷೀಟ್ ಕೂಡ ಇಲ್ಲ. ಒಂದೇ ಬೆಡ್‌ಷೀಟನ್ನು ಇಬ್ಬರು ಹೊದಿಯುತ್ತಿರುವ ದೃಶ್ಯ ನೋಡಿದಾಗ ಅತೀವ ನೋವಾಗುತ್ತದೆ. ಒಂದು ಟವೆಲ್ ಕೊಳ್ಳಲು ಒದ್ದಾಡುತ್ತವೆ. ಅಂಥ ಮಕ್ಕಳ ಬಗ್ಗೆ ನಮಗೆ ಸದಾ ಚಿಂತೆಯಾಗಿದೆ.






# ಮಠದಿಂದ ಮಹಾರಾಷ್ಟ್ರಕ್ಕೆ

*– ಹೆಚ್.ವಿ. ವೀರಭದ್ರಯ್ಯ*

ದಿನಾಂಕ ೨೯.೧.೨೦೦೧ರಂದು ಸಂಜೆ ಏಳು ಘಂಟೆಗೆ ಸುಸಜ್ಜಿತ ಪ್ರವಾಸಿ ಬಸ್ಸು 'ಮಂಜುನಾಥ' ಶ್ರೀಮಠ ಸಿದ್ಧಗಂಗಾದಿಂದ ಶ್ರೀ ಸಿದ್ಧಲಿಂಗೇಶ್ವರ ನಾಟಕ ತಂಡದವರನ್ನು ಹೊತ್ತು ಹೊರಟಿತು. ಪರಮ ಪೂಜ್ಯ ಶ್ರೀಗಳವರ ನಿರ್ದೇಶನದಂತೆ ಸೊಲ್ಲಾಪುರಕ್ಕೆ ಮೂವತ್ತಾರು ಕಿ.ಮೀ. ದೂರದ ಕರಜಿಗೆ ಗ್ರಾಮಕ್ಕೆ ಪ್ರಯಾಣ ಪ್ರಾರಂಭಿಸಿತು. ಕರಜಿಗೆ ಗ್ರಾಮ ಅಕ್ಕಲಕೋಟಿಯ ತಾಲ್ಲೂಕಿನಲ್ಲಿರುವ ಕರಣ ಗಜೇಶ ಮಸಣಯ್ಯನವರ ಜನ್ಮಸ್ಥಳ. ಅಚ್ಚ ಕನ್ನಡ ಪ್ರದೇಶ. ಆದರೆ ಈಗ ಮಹರಾಷ್ಟ್ರಕ್ಕೆ ಸೇರಿರುವ ಪುಣ್ಯಕ್ಷೇತ್ರ. ಗಜೇಶಮಸಣಯ್ಯ ಬಸವಣ್ಣನವರ ಸಮಕಾಲೀನ ಶರಣ. ಮಧುರ ಭಾವದ ವಚನಗಳ ಕರ್ತೃ. ಶಿವಯೋಗ ಸಾರ್ವಭೌಮ ಬೆಣ್ಣೆತೊರೆ ಪವಾಡ ಮೆರೆದ ಮಹಿಮಾಪುರುಷ.

ಶ್ರೀಗಳವರ ಆಶೀರ್ವಾದ ಪಡೆದು ಹೊರಟ ನಾಟಕ ತಂಡದವರು ತುಮಕೂರಿನಲ್ಲಿ ಸಂಗೀತ ನಿರ್ದೇಶಕರಾದ ಸನ್ಮಾನ್ಯ ಶ್ರೀ ಕೆ.ಎ ವೆಂಕಟರಾಮ ಭಾಗವತರು ಮತ್ತು ಉಪವಾದ್ಯದ ಕಲಾವಿದರನ್ನು ಹಾಗೂ ಮತ್ತಿತ್ತರ ಪಾತ್ರಧಾರಿಗಳನ್ನು ಕೂಡಿಕೊಂಡರು. ಮ್ಯಾನೇಜರ್ ಶ್ರೀ ಪಿ.ಎಸ್. ಚಂದ್ರಶೇಖರಯ್ಯನವರು ರಾತ್ರಿ ಎಂಟು ಗಂಟೆ ಸುಮಾರಿಗೆ ರಾಷ್ಟ್ರೀಯ ಹೆದ್ದಾರಿ ನಾಲ್ಕರಲ್ಲಿ ಶಿರಾ, ಹಿರಿಯೂರು ಮಾರ್ಗವಾಗಿ ಬಸ್ಸನ್ನು ಓಡಿಸಲು ಡ್ರೈವರನಿಗೆ ಸೂಚಿಸಿದರು. ಡ್ರೈವರ್ ತುಂಬಾ ಸಂಭಾವಿತ. ತಾಳ್ಮೆಯ ಗುಣ ಆತನದು – ಉತ್ಸಾಹ, ಹುಮ್ಮಸುಗಳ ಸಡಗರ ಬಸ್ಸಿನೊಳಗೆ, ಕಲಾವಿದರ ಮಾತುಗಳ ಪುಟ್ಟಲೋಕ. ಅದೂ ಜಂಗಮ ಪ್ರಪಂಚದ ಸ್ಥಾವರವನ್ನು ಜಂಗಮ ಶೀಲವಾಗಿಸಿದ ಬಸವಾದಿ ಶರಣರ ಜೀವನವನ್ನು ಕುರಿತ ನುಡಿಗಳು. ಸಿದ್ಧರಾಮನ ಜನ್ಮಭೂಮಿ, ತಪೋರಂಗ, ಸಾಧನ ಕ್ಷೇತ್ರದ ಸುತ್ತ ಅರಳಿದ ಮಾತುಗಳು. ಬಸ್ಸು ಹಿರಿಯೂರು ದಾಟಿದ ಹದಿನೈದು ಕಿ.ಮೀ. ದೂರ ಚಲಿಸುತ್ತಿತ್ತು. ಗುಯಿಲಾಳು ಗ್ರಾಮದ ಬಳಿಯಲ್ಲಿ ಓಡುತ್ತಿತ್ತು. ಇದ್ದಕ್ಕಿದ್ದಂತೆ ಬಸ್ಸಿನ ಮುಂಭಾಗದ ವಿಶಾಲವಾದ ಗಾಜು ಸಿಡಿಯಿತು. ನುಚ್ಚುನೂರಾಯಿತು – ಬಸ್ಸಿನಲ್ಲಿದ್ದ ಎಲ್ಲರ ಎದೆ ತಲ್ಲಣಿಸಿತು. ಗುಜರಾತಿನ ಭೂಕಂಪನದ ಅಲೆಗಳ ಭಯ ಇನ್ನೂ ಅಡಗಿರಲಿಲ್ಲ ಏನಾಯಿತು? ಎಂದು ಎಲ್ಲರೂ ಗಾಬರಿಗೊಂಡರು. ಅರೆನಿದ್ದೆ, ಮರಿನಿದ್ದೆಯಲ್ಲಿದ್ದವರೆಲ್ಲ ಎದ್ದರು. ಗಾಜಿಗೆ ಏನೋ ಬಡಿಯಿತು ಎಂದು ಕೆಲವರು, ಇಲ್ಲ ಯಾರೋ ಕಲ್ಲು ಎಸೆದಿರಬೇಕು ಎಂದು ಇನ್ನು ಕೆಲವರು, ಇಲ್ಲಿ ಎದುರಿಗೆ ಬಂದ ಲಾರಿ ಚಕ್ರಕ್ಕೆ ಸಿಕ್ಕ ಕಲ್ಲು ಪುಟಸಿಡಿದು ಬಡಿಯಿತು ಎಂದು ಮತ್ತೆ ಕೆಲವರು ಎನ್ನುತ್ತಿರುವಷ್ಟರಲ್ಲಿ ಡ್ರೈವರ್ ಹೇಳಿದ ಗಾಜಿನಲ್ಲಿ ಗಾಳಿಗುಳಿ (ಏರ್ ಕ್ರ್ಯಾಕ್)ಯಿತ್ತೆಂದು ಕಾಣುತ್ತದೆ ಅದು ಸಿಡಿದು ಗಾಜು ಒಡೆಯಿತು ಎಂದ. ಗಾಜಿನ ಚೂರುಗಳನ್ನೆಲ್ಲಾ ವಿದ್ಯಾರ್ಥಿ ಮಲ್ಲಿಕಾರ್ಜುನ ಗುಡಿಸಿ ಹೊರಚೆಲ್ಲುವಷ್ಟರಲ್ಲಿ ಇಪ್ಪತ್ತು ನಿಮಿಷಗಳು ಕಳೆದು ಹೋದವು. ಗಾಜಿದ್ದ ಭಾಗಕ್ಕೆ ಒಂದು ಬೆಡ್‌ಷೀಟ್‌ನ್ನು ಕಟ್ಟಲಾಯಿತು. ಬಸ್ಸು ಮೊದಲಿನ ವೇಗ ಮಿತಿಯನ್ನು ಕಡಿಮೆಮಾಡಿಕೊಂಡು ಚಿತ್ರದುರ್ಗದತ್ತ ಹೊರಟಿತು. ಅಲ್ಲಿ ಗಾಜನ್ನು ಜೋಡಿಸುವ ಆಸೆ ಹೊತ್ತು ಹೊರಟ ಬಸ್ಸಿಗೆ ನಿರಾಶೆ ಕಾದಿತ್ತು. ಕೊನೆಗೆ ಬೆಡ್‌ಷೀಟ್ ಹೊತ್ತೇ – ಕಣ್ಣಿಗೆ ಆಪರೇಷನ್ ಮಾಡಿಸಿಕೊಂಡ ರೋಗಿ ಕಣ್ಣಿನ ಮೇಲೆ ಬಟ್ಟೆರಕ್ಷೆಯನ್ನು ಹಾಕಿಕೊಂಡಂತೆ – ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಹೊಸಪೇಟೆ ಮುಖಮಾಡಿತು. ಕಲಾವಿದರು ಒಬ್ಬೊಬ್ಬರಾಗಿ ನಿದ್ರಾದೇವಿಯ ಸುಖಾಲಿಂಗನವಶರಾಗಿ ವಿವಿಧಾಸನ ಮುದ್ರೆಗಳಲ್ಲಿ ಮಗ್ನರಾಗಿದ್ದರು. ಹೊಸಪೇಟೆಯನ್ನು ದಾಟಿ ತುಂಗಭದ್ರಾ ಅಣೆಕಟ್ಟಿನ ಬಳಿ ಒಂದು ಪಂಜಾಬಿ ಡಾಬ ಹೋಟೆಲಿನ ಬಳಿ ಬಸ್ಸು ನಿಂತಿತು. ಇತ್ತೀಚೆಗೆ ಕರ್ನಾಟಕದ ಉದ್ದಗಲದಲ್ಲಿ ಡಾಬ ಸಂಸ್ಕೃತಿ ಬೆಳೆಯುತ್ತಿರುವುದನ್ನು ಯಾರೂ ಕಾಣಬಹುದು. ರಾತ್ರಿ ವೇಳೆಯ ಉಪಹಾರ, ಭೋಜನ, ಕಾಫಿ, ಟೀಗಳ ಸರಬರಾಜು ಕೇಂದ್ರಗಳಾದ ಡಾಬಗಳು ಲಾರಿ, ಟ್ರಕ್ಕುಗಳ ವಿರಾಮ ನಿಲ್ದಾಣಗಳೂ ಹೌದು. ನಮ್ಮ ಬಸ್ಸಿನ ಡ್ರೈವರ್ ಟೀ ಕುಡಿಯಲು ಡಾಬಗೆ ತೆರಳಿದ. ಎಚ್ಚರಗೊಂಡ ಕಲಾವಿದರು ಮೂತ್ರವಿಸರ್ಜನೆಗೆ ಅವಕಾಶವನ್ನು ಬಳಸಿಕೊಂಡರು. ಕೆಲವರು ಟೀಯನ್ನೂ ಕುಡಿದು ತಾವೂ ಡಾಬ ಸಂಸ್ಕೃತಿ ಪ್ರಿಯರೆಂಬುದನ್ನು ತೋರಿಸಿಕೊಂಡರು.

ಬಸ್ಸು ಮುಂದೆ ಸಾಗಿತು. ಆಲಮಟ್ಟಿ ಅಣೆಕಟ್ಟು ದಾಟಿ ಬಿಜಾಪುರದತ್ತ ತುಂಬು ಬಸುರಿ ನಡೆಯುವಂತೆ ಹೆಜ್ಜೆ ಹಾಕಿತು. ನಸುಕು ಹರಿಯುತ್ತ ಬರುತ್ತಿತ್ತು. ಬಿಜಾಪುರದ ಬೈಪಾಸ್ ಬಳಿಗೆ ಹೋಗುವಷ್ಟರಲ್ಲಿ ಕರಜಿಗೆ ಗ್ರಾಮದಿಂದ ನಮ್ಮನ್ನು ಸ್ವಾಗತಿಸಲು ಬಂದಿದ್ದ ಬಂಧುಗಳ ಚೆಂಗಾವಿ ಬಾವುಟ ಹೊತ್ತು ನಿಂತಿದ್ದ

ಜೀಪು ಕಾಣಿಸಿತು. ಅಲ್ಲಿಂದ ಜೀಪಿನ ಮಾರ್ಗದರ್ಶನದಲ್ಲಿ ಪ್ರಯಾಣ ಮುಂದುವರಿಯಿತು. ಬೆಳಗಿನ ಸಮಯ. ಆರೂವರೆ ಗಂಟೆ ಸೂರ್ಯೋದಯದ ಮಂಗಳ ಸನ್ನಿವೇಶ. *'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ'* – ಎತ್ತೆತ್ತಲೂ ಪ್ರಾಣಿಗಳ, ಪಕ್ಷಿಗಳ ಜೀವನೋತ್ಸಾಹ. ಬಯಲ ತುಂಬ ತಂಗಾಳಿ ಸಹ ಪ್ರಯಾಣಿಕರ ಚಡಪಡಿಕೆ ಪ್ರಾರಂಭವಾಯಿತು. ಬೆಳಗಿನ ನಿತ್ಯ ಕರ್ಮಗಳಿಗಾಗಿ ನೀರನ್ನು ಕಾಣಲೆಳಸಿದ ಕಣ್ಣುಗಳು. ಒಂದೆರಡು ಕಡೆ ನೀರು ಕಂಡರೂ ಮುಂದೆ ಹೋಗೋಣವೆಂಬ ಮ್ಯಾನೇಜರರ ಆದೇಶ. ಬಿಜಾಪುರದ 'ಗೋಳಗುಮ್ಮಟ' ಅಗೋ ಕಾಣುತ್ತಿದೆ ಎಂಬ ಕುತೂಹಲದ ಮಾತುಗಳ ನಡುವೆ ಬಸ್ಸು ಇಂಡಿಮಾರ್ಗದಲ್ಲಿ ಮುಂದುರುಳಿತು. ಮೂವತ್ತು – ಮೂವತ್ತೈದು ಕಿ.ಮೀ. ಸಾಗಿದ ನಂತರ ಅಲ್ಲೊಂದು ನೀರಿನ ಸಿಮೆಂಟಿನ ದೊಡ್ಡ ತೊಟ್ಟಿ ವ್ಯವಸಾಯದ ಅನುಕೂಲಕ್ಕಾಗಿ ಮಾಡಿದ್ದ ಕಿರು ಜಲಸಂಗ್ರಹಣ ನಿರ್ಮಾಣ. ನೀರು ತುಂಬಿತ್ತು. ಮ್ಯಾನೇಜರ್ ಬಸ್ಸು ನಿಲ್ಲಿಸ ಹೇಳಿದರು. ಬಸ್ಸು ನಿಂತಿತು. ಕಲಾವಿದರೆಲ್ಲ ದಡ ದಡನೆ ಇಳಿದು ನಿತ್ಯಕರ್ಮ ಮುಗಿಸಿದರು. ಎಲ್ಲ ಬಸ್ಸಿಗೆ ಹಿಂತಿರುಗಿದನಂತರ ಬಸ್ಸು ಇಂಡಿ ಮಾರ್ಗವನ್ನು ಕ್ರಮಿಸುತ್ತ ಹೊರಟಿತು. ತಾಲ್ಲೂಕು ಕೇಂದ್ರವಾದ 'ಇಂಡಿ'ಯನ್ನು ದಾಟಿ ಮಾರ್ಗದರ್ಶಕ ಜೀಪನ್ನು ಹಿಂಬಾಲಿಸಿ ಕರಜಿಗೆಯತ್ತ ಧಾವಿಸಿತು. ನಾವು ಬಿಜಾಪುರದಿಂದ ಸೊಲ್ಲಾಪುರಮಾರ್ಗದಲ್ಲಿ ಕರಜಿಗೆಗೆ ಹೋಗಬೇಕಾಗಿತ್ತು. ಅದು ನೇರ ದಾರಿ. ಆದರೆ ಬಸ್ಸಿಗೆ ಅಂತರರಾಜ್ಯದ ಲೈಸನ್ಸನ್ನು ಪಡೆದುಕೊಂಡಿರಲಿಲ್ಲವಾಗಿ ಕರ್ನಾಟಕ ಗಡಿಗ್ರಾಮಗಳ ದಾರಿಯಲ್ಲಿ ಬಸ್ಸು ತೆರಳುತ್ತಿತ್ತು. ಇಂಡಿಬಿಟ್ಟನಂತರ ಅತ್ಯಂತ ಕಿರು ದಾರಿಗಳಲ್ಲಿ, ಎತ್ತಿನ ಗಾಡಿ ಜಾಡಿನಲ್ಲಿ, ಉಕ್ಕಲದ ಜಾಲಿಗಿಡಗಳ ನಡುವೆ ಮಂದಗತಿಯಲ್ಲಿ ಬಸ್ಸು ಚಲಿಸುತ್ತಿತ್ತು. ನಮಗೆಲ್ಲ ಹೊಟ್ಟೆ ಚುರುಗುಟ್ಟುತ್ತಿತ್ತು. ಎಲ್ಲಿ ಕಾಫಿ, ತಿಂಡಿ ಯಾವಾಗ ಎಂಬುದೇ ಒಬ್ಬೊಬ್ಬರದೂ ಒಂದೊಂದು ಚಿಂತೆ. ಎಲ್ಲೋ ಒಂದೆಡೆ ರಸ್ತೆ ರಿಪೇರಿಯಲ್ಲಿ ತೊಡಗಿದ್ದ ಕೆಲಸಗಾರನೊಬ್ಬನನ್ನು 'ಕರಜಿಗೆ' ಎಷ್ಟು ದೂರವಿದೆ ಎಂದು ಕೇಳಿದೆವು. ಐದು ಕಿ.ಮೀ. ಎಂದ. ಸಂತೋಷವಾಯಿತು. ಆದರದು ಟುಸ್ಸೆಂದಿತು. ಮುಂದೆ ಎದುರಾದ ಮಿನಿಟ್ರಕ್ಕಿನ ಡ್ರೈವರನನ್ನು ವಿಚಾರಿಸಿದಾಗ. ಅವನು ಇನ್ನೂ ೪೫ ಕಿ.ಮೀ ಇದೆ ಎಂದ. ಸಪ್ಪೆಮುಖದೊಡನೆ ಅಕ್ಕಲ ಕೋಟೆಗೆ ಬಂದಾಗ ೧೨ ಗಂಟೆ. ರೈಲ್ವೆ ಗೇಟು ಹಾಕಿತ್ತು. ಹೊಟ್ಟೆ ತಾಳ ಹೊಡೆಯುತ್ತಿತ್ತು. ಅಲ್ಲಿ ವಿಚಾರಿಸಲಾಗಿ ಇನ್ನು ಅರ್ಧ ಗಂಟೆ ಪ್ರಯಾಣ ಕರಜಿಗೆಗೆ ಎಂದು ತಿಳಿಯಿತು. ಯಾವಾಗ ತಲುಪುತ್ತೇವೆಯೋ ಸ್ನಾನ ಪೂಜೆ ತಿಂಡಿ ಎಷ್ಟೊತ್ತಿಗೋ ಎಂದು ಗುಣಾಕಾರ ಹಾಕುತ್ತಾ ಮುಂದಾದೆವು. ನಮ್ಮ ಜೊತೆಗೆ ಲಾರಿ ಬಂದಿತ್ತು. ಕಾರು ನಂ. ೧೦೧ ಮುಂದೆ ತೆರಳಿತ್ತು. ಅದರಲ್ಲಿ ಗುಲಬರ್ಗ, ರೋಡಗಿ, ಅಂಕನಹಳ್ಳಿ, ಶಿವಗಂಗೆಯ ಹೊನ್ನಮ್ಮ ದೇವಿ ಗವಿಮಠದ ಶ್ರೀಗಳು ಮತ್ತು ಶ್ರೀ ಬಸವರಾಜು ಪ್ರಮಾಣಿಸಿದ್ದರು. ಕರಜಿಗೆಗೆ ಮಧ್ಯಾಹ್ನ ೧೨.೩೦ಕ್ಕೆ ತಲುಪಿದಾಗ ನಮಗಾದ ಆನಂದ ಹೇಳತೀರದು. ತುರುವೇಕೆರೆ ಶ್ರೀ ಕಾಡಸಿದ್ಧೇಶ್ವರ ಮಠದ ಪೂಜ್ಯ ಶ್ರೀ ಕರಿವೃಷಭ ದೇಶಿಕೇಂದ್ರ ಸ್ವಾಮಿಗಳು ನಮ್ಮನ್ನೆಲ್ಲಾ ಪ್ರೀತಿಯಿಂದ ಸ್ವಾಗತಿಸಿದರು. ಸ್ನಾನ ಪೂಜೆ ಪ್ರಸಾದಕ್ಕೆ ವ್ಯವಸ್ಥೆಮಾಡಿದರು. ಹಸಿದ ಹೊಟ್ಟೆಗಳು ಚಪಾತಿ, ಜೋಳದ ರೊಟ್ಟಿ ಚಟ್ನಿಗಳನ್ನು ಕಬಳಿಸಿದವು. ಪ್ರಸಾದದ ಸವಿಯನ್ನು ಮೆಲುಕು ಹಾಕುತ್ತ ವಿಶ್ರಾಂತಿಗೆಂದು ನಿಗದಿಗೊಳಿಸಿದ್ದ ವಿಶಾಲವಾದ ಕೊಠಡಿಯಲ್ಲಿ ಅಡ್ಡಾದವು. ಕೆಲವೇ ಕ್ಷಣಗಳಲ್ಲಿ ನಿದ್ದೆ ಹೋದವು.

ಪರಮ ಪೂಜ್ಯ ಶ್ರೀ ಶ್ರೀಗಳವರು ದಿನಾಂಕ ೩೦.೧.೨೦೦೧ರ ಪ್ರಾತಃಕಾಲ ಆರೂವರೆಗೆ ಸಿದ್ಧಗಂಗಾ ಮಠದಿಂದ ಕರಜಿಗೆಗೆ ಪ್ರಯಾಣ ಪ್ರಾರಂಭಿಸಿ ಮಧ್ಯಾಹ್ನ ಒಂದೂವರೆ ವೇಳೆಗೆ ದಯಮಾಡಿಸಿದರು. ಶ್ರೀಗಳವರು ಬಂದದ್ದು ಕರಜಿಗೆಯ ವಿರಕ್ತ ಮಠಕ್ಕೆ, ಜನಸಾಗರಕ್ಕೆ ಪ್ರಾಣ ಸಂಚಾರವಾದಂತಾಯಿತು. ಎಲ್ಲರ ಬಾಯಲ್ಲಿ ಶ್ರೀಗಳವರದೇ ಮಾತು. ಶ್ರೀಗಳವರು ಶತಾಯುಷಿಗಳಂತೆ, ಅಪರೂಪದ ತಪಸ್ವಿಗಳಂತೆ, ಸಹಸ್ರಾರು ಮಕ್ಕಳಿಗೆ ಆಶ್ರಯವಿತ್ತಿರುವ ಪುಣ್ಯಾತ್ಮರಂತೆ, ಬಸವಣ್ಣನವರ ಅವತಾರವಂತೆ ಎಂಬ ಭಕ್ತಿ ನುಡಿಗಳು ಕೇಳಿಬಂದವು. ಪೂಜ್ಯರು ಪೂಜೆ ಪ್ರಸಾದ ಮುಗಿಸಿ ಸಭಾವೇದಿಕೆಗೆ ಹೊರಟುನಿಂತಾಗ ಹರಗುರು ಚರಮೂರ್ತಿಗಳ ಜಾತ್ರೆಯೇ ನಡೆದಂತಾಯಿತು. ಸಮಾರಂಭಕ್ಕೆ ಆಗಮಿಸಿದ್ದ ಸಾವಿರ ಸಾವಿರ ಭಕ್ತಾದಿಗಳು, ತಾಯಂದಿರು ಶ್ರೀಗಳವರ ಶ್ರೀ ಚರಣಗಳಿಗೆ ನಮಸ್ಕರಿಸಲು ಆಗದಂತಾದಾಗ ತಾವಿದ್ದಕಡೆಯಿಂದಲೆ ನೆಲಮುಟ್ಟಿ ಕೈಗಳನ್ನು ಕಣ್ಣಿಗೊತ್ತಿಕೊಳ್ಳುತ್ತಿದ್ದುದನ್ನು ಕಂಡಾಗ, ಮೈಲಾರದ ಬಸವಲಿಂಗ ಶರಣರು ಹೇಳಿದ *''ನೀನೊಲಿದು ಪಾದವನಿಟ್ಟ ಧರೆಯು ಪಾವನ'*'ವೆಂಬ ಭಕ್ತಿನುಡಿಗಳು ನೆನಪಾದವು.

ಎತ್ತರವಾದ ವೇದಿಕೆ ವಿಶಾಲವಾಗಿ ನಿರ್ಮಾಣ ಮಾಡಿದ್ದರು. ಹಿನ್ನೆಲೆಯಲ್ಲಿ ಶ್ರೀ ಗುಡ್ಡದ ಬಸವರಾಜ ಸ್ವಾಮಿಗಳ ಅಮೃತ ಶಿಲೆಯ ಶಿಲಾಮೂರ್ತಿ. ಭವ್ಯವಾದ ನಾಮಫಲಕ. ದೀಪಕನ್ಯೆಯ ಲೋಹಸ್ತಂಭ. *'ಜ್ಯೋತಿಯ ಬಲದಿಂದ ತಮಂಧದ ಕೇಡನೋಡಯ್ಯಾ'* ಎನ್ನುವಂತೆ ಉದ್ಘಾಟನೆಯಾಯಿತು. ಪೂಜ್ಯ ಶ್ರೀಗಳವರು ದೀಪ ಬೆಳಗಿಸಿದರು. ವಚನ ಮಂಗಲ ಪಠನ *''ಓಂ ಶ್ರೀ ಗುರು*





*ಬಸವಲಿಂಗಾಯನಮಃ''* ಪ್ರಣವದ ಘೋಷ ತಾರಕಕ್ಕೇರಿತು. ಕ್ರಮವಾಗಿ ಪ್ರವಚನ, ಅನುಭಾವಗಳಾದವು. ಮಾತಾಡಿದ ಎಲ್ಲ ಮಠಾದೀಶರೂ ಪರಮಪೂಜ್ಯ ಶ್ರೀ ಶ್ರೀಗಳವರ ಅಗಾಧ ಸೇವೆಯನ್ನು, ದಾಸೋಹ ಮಣಿಹದ ಮಹತ್ತನ್ನು ಪ್ರಶಂಸಿದರು. ೯೩ರ ತುಂಬು ವಯಸ್ಸಿನಲ್ಲಿಯೂ ಆರು ನೂರೈವತ್ತು ಕಿ.ಮೀ. ಸಂಚರಿಸಿ ಬಂದರೂ ಪ್ರಸನ್ನ ಚಿತ್ತರಾಗಿದ್ದ ಶ್ರೀಗಳವರ ಶಿವಯೋಗದ ರಹಸ್ಯವನ್ನು ಕೊಂಡಾಡಿದರು. ವಿರಕ್ತ ಮಠದ ಪೂಜ್ಯ ಶ್ರೀ ಶಿವಾನಂದ ಶಿವಾಚಾರ್ಯರಿಗೆ ಹಾಗೂ ತುರುವೇಕೆರೆ ಕಾಡಸಿದ್ಧೇಶ್ವರ ಮಠದ ಪೂಜ್ಯ ಶ್ರೀ ಕರಿವೃಷಭ ದೇಶಿಕೇಂದ್ರಸ್ವಾಮಿಗಳವರಿಗೆ ಎಲ್ಲಿಲ್ಲದ ಆನಂದ. ಸಿದ್ಧಗಂಗಾ ಶ್ರೀಗಳವರ ಆಗಮನದಿಂದ ಧನ್ಯಮನರಾಗಿದ್ದರು.

''ಬಸವಣ್ಣನವರು ಈ ಜಗತ್ತನ್ನು ಪ್ರೀತಿಸಿದವರು. ಇಹದ ಜೀವನವನ್ನು ಸಂಭ್ರಮಿಸಿದವರು. ಪ್ರೀತಿಯನ್ನು ಎಲ್ಲೆಡೆಗೆ ಚೆಲ್ಲಿದರು. ಅವರು ಮಾನವ ಪ್ರಜ್ಞೆಯನ್ನು ಬಿತ್ತಿದರು, ಬೆಳೆದರು. ಬಸವಣ್ಣನವರು ಎಲ್ಲರಂತಲ್ಲ. ಅವರೊಂದು ವಿಶಿಷ್ಟ ಸೃಷ್ಟಿ. ಆಚಾರ-ವಿಚಾರಗಳ ಸಂಗಮ. ಅಂತರಂಗ-ಬಹಿರಂಗಗಳ ಸಮೀಕರಣ, ಕಾಯಕ-ದಾಸೋಹಗಳ ಐಕ್ಯತೆ, ವಿಪ್ರ-ಹೊಲೆಯೆಂಬುದಕ್ಕೆ ನೂತನ ವ್ಯಾಖ್ಯಾನ ನೀಡಿದ ಧೀಮಂತಿಕೆ, ಇಹ-ಪರಗಳ ಸ್ಪಷ್ಟನೆ, ಹೆಣ್ಣು-ಗಂಡೆಂಬುದರ ವಿಶ್ಲೇಷಣೆ, ಸ್ಥಾವರ-ಜಂಗಮಗಳ ವ್ಯಾಖ್ಯಾನ, ನುಡಿ-ನಡೆಗಳ ವಿವರಣೆ, ಭಕ್ತಿಯ ಮಹತ್ವ, ಇಲ್ಲಿ-ಅಲ್ಲಿ ಸಲ್ಲುವ ಜೀವನ ಕಲೆಯನ್ನು ಕಲಿಸಿಕೊಟ್ಟ ಅಪೂರ್ವ ವ್ಯಕ್ತಿತ್ವದ ಶಿವಸೃಷ್ಟಿ ಬಸವಣ್ಣನವರು'' ಎಂದು ಆಶೀರ್ವಚನ ನೀಡಿದರು ಪರಮಪೂಜ್ಯ ಶ್ರೀ ಶ್ರೀಗಳು, ಕಿವಿಗಡ ಚಿಕ್ಕುವ ಹಾಗೆ ಚಪ್ಪಾಳೆಯೊಂದಿಗೆ ಜನಸಾಗರ ಸಂತೋಷವನ್ನು ವ್ಯಕ್ತಪಡಿಸಿತು.

''ನಾವು ಇಂಥ ಸ್ಟೇಜನ್ನು ನೋಡಿದವರಲ್ಲ, ಎಷ್ಟೊಂದು ಚೆನ್ನಾಗಿದೆ'' ಎಂದವರು ನೂರಾರುಮಂದಿ. ನಾಟಕದ ಸ್ಟೇಜನ್ನು ಕಟ್ಟುತ್ತಿದ್ದ ಸಂದರ್ಭದಲ್ಲಿ ಸುತ್ತ ಗೇರಾಯಿಸಿದ ಕರಜಿಗೆಯ ಸುತ್ತಮುತ್ತಣ ಗ್ರಾಮ ಬಂಧುಗಳು ತೆರೆದ ಕಣ್ಣು, ಬಿಟ್ಟ ಬಾಯಿಂದ ನೋಡಿ ಮೆಚ್ಚಿಗೆಯನ್ನು ಸೂಚಿಸಿದರು.

ನಾಟಕದ ಉದ್ಘಾಟನೆಯನ್ನು ಸಚಿವ ಶ್ರೀ ಕತ್ತಿಗೆಯವರು ಹಾಗೂ ಸ್ಥಳೀಯ ಶಾಸಕ ಶ್ರೀ ಸಿದ್ರಾಮ ಮೈತ್ರಿಯವರು ನಡೆಸಿಕೊಟ್ಟರು. ರಾತ್ರಿ ೯.೩೦ಕ್ಕೆ ನಾಟಕ *'ಶ್ರೀ ಜಗಜ್ಯೋತಿ ಬಸವೇಶ್ವರ'* ಪ್ರಾರಂಭವಾಯಿತು. ನಾಟಕ ನೋಡಲು ಬಂದದ್ದು ಸುಮಾರು ೨೫ರಿಂದ ೩೦ ಸಾವಿರ ಮಂದಿ ಸ್ಥಳಾವಕಾಶ ಕಿರಿದಾಗಿ ನಿಂತು ನೋಡಿದರು. ಎಷ್ಟೋ ಮಂದಿ ದೃಶ್ಯಗಳು ಒಂದೊಂದಾಗಿ ಸಾಗಿದಂತೆ ಗ್ರಾಮೀಣ ಬಂಧುಗಳು ತಾದಾತ್ಮ್ಯ ಹೊಂದಿದರು. ನಾಟಕದೊಡನೆ ಉದ್ದಕ್ಕೂ ಸ್ಪಂದಿಸಿದರು. ಬಸವಣ್ಣನ ಪಾತ್ರವನ್ನಂತೂ ಮಂತ್ರಮುಗ್ಧರಾಗಿ ನೋಡಿದರು. ಕೆಲವರು ಮಧ್ಯೆ ಬಣ್ಣದ ಮನೆಗೆ ಬಂದು ಕಾಲುಮುಟ್ಟಿ ನಮಸ್ಕರಿಸಿದರು. ಮತ್ತೆ ಕೆಲವರು ಅಭಿಮಾನ ಸಂತೋಷಾರ್ಥವಾಗಿ ನೂರು, ಐವತ್ತು, ಇಪ್ಪತ್ತೈದು, ಹತ್ತು, ಐದು ರೂಗಳನ್ನು ಕೊಟ್ಟು ಹರ್ಷಿಸಿದರು. ಓರ್ವ ಎಂಬತ್ತೈದು ವರ್ಷದ ಅಜ್ಜಿ ಐದೂ ರೂಪಾಯಿಯನ್ನಿತ್ತು *''ಎಂಥಾ ನಾಟಕವನ್ನಾಡಿದರಪ್ಪಾ ! ಪುಣ್ಯ ಬರಲಿ ನಿಮಗೆ ! ಆ ನನ್ನಪ್ಪ ಸ್ವಾಮಿಗಳ ಪಾದಕ್ಕೆ ನಮಸ್ಕಾರ''* ಎಂದುದನ್ನು ಕೇಳಿದಾಗ ಹೃದಯ ತುಂಬಿಬಂತು ''ನಾಟಕಕ್ಕೆ ಎಷ್ಟು ಖರ್ಚುಬರುತ್ತದೆ ನಮ್ಮೂರಲ್ಲಿ ಆಡಿಸಬೇಕು'' – ಎಂದು ನಾಲ್ಕಾರು ಗ್ರಾಮದವರು ವಿಚಾರಿಸಿದರು. ನಾಟಕ ಒಳ್ಳೆಯ ಅಭಿಪ್ರಾಯವನ್ನು ರೂಪಿಸಿತು. ವಿರಕ್ತಮಠದ ಪೂಜ್ಯಶ್ರೀಗಳಿಗೆ ತೃಪ್ತಿಯುಂಟಾಯಿತು. ಮೂವತ್ತುಮಂದಿ ಮಠಾಧೀಶರು ನಾಟಕ ನೋಡಲೆಂದು ಬಂದು ಕುಳಿತವರು ಬೆಳಗಾಗುವವರೆಗೂ ಏಳಲಿಲ್ಲ, 'ತುಂಬಾ ಚೆನ್ನಾಗಿದೆ' ನಾಟಕ. ಹಿಂದೆ ಏಣಗಿ ಬಾಳಪ್ಪನವರು ಆಡುತ್ತಿದ್ದ ಶ್ರೀಕಂಠಶಾಸ್ತ್ರಿಗಳು ರಚಿಸಿದ್ದ ಬಸವೇಶ್ವರರ ನಾಟಕ ನೋಡಿದ್ದೆವು. ಆದರೆ ಇದು ಅದಕ್ಕಿಂತಲೂ ಸುಂದರ, ಅರ್ಥಪೂರ್ಣ, ಬಸವಣ್ಣನವರ ವ್ಯಕ್ತಿತ್ವಕ್ಕೆ ಒಪ್ಪವಿಟ್ಟಂತಿದೆ' ಎಂದು ತಮ್ಮ ಅನಿಸಿಕೆಯನ್ನು ವ್ಯಕ್ತಪಡಿಸಿದರು. ಪಾತ್ರಧಾರಿಗಳ ಪರಿಚಯಮಾಡಿಕೊಂಡು ಮೆಚ್ಚಿಗೆ ಸೂಚಿಸಿದರು.

ಬೆಳಗಿನ ಸ್ನಾನಪೂಜೆ ಪ್ರಸಾದ ಮುಗಿಸಿಕೊಂಡು ಸೊಲ್ಲಾಪುರಕ್ಕೆ ಸಿದ್ಧರಾಮ ಶಿವಯೋಗಿಯ ಗದ್ದುಗೆಯ ದರ್ಶನಕ್ಕೆ ನಾಟಕ ತಂಡದವರು ತೆರಳಿದರು. ಜೊತೆಗೆ ಸೊಲ್ಲಾಪುರದ ಬೆಡ್‌ಷೀಟ್‌ಗಳ ಆಕರ್ಷಣೆ ಎಲ್ಲರನ್ನೂ ಸೆಳೆದಿತ್ತು.

ಪರಮಪೂಜ್ಯ ಶ್ರೀ ಶ್ರೀಗಳವರು ಪೂಜ್ಯಗುಡ್ಡದ ಬಸವರಾಜ ಸ್ವಾಮಿಗಳ ಮೂರ್ತಿ ಸ್ಥಾಪನೆ ಮತ್ತು ೪೮ ಜೋಡಿಗಳ ಸಾಮೂಹಿಕ ವಿವಾಹ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ, ಆಶೀರ್ವಚನನೀಡಿ ಸೊಲ್ಲಾಪುರಕ್ಕೆ ಹೊರಟಾಗ ಮಧ್ಯಾಹ್ನ ೧೨ ಗಂಟೆಯಾಯಿತು. ಶ್ರೀಗಳವರ ವಾಹನದಲ್ಲಿ ನಾಲ್ಕು ಮಂದಿ ಪೂಜ್ಯಪಾದರು, ಶ್ರೀ ಬಿ. ಚಂದ್ರಶೇಖರಯ್ಯ, ಡ್ರೈವರ್ ಶ್ರೀ ರಾಜಶೇಖರಯ್ಯ ಮತ್ತು ಲೇಖಕ, ಮುಂದೆ ಮೋಟಾರ್ ಬೈಕ್‌ನ ಮೇಲೆ ಸೊಲ್ಲಾಪುರದ ಶ್ರೀ ಕಿರೀಟೇಶ್ವರ ಮಠದ ಶ್ರೀಗಳು ಮತ್ತು ನಾಗಣಸೂರ ಮಠದ ಶ್ರೀಗಳು ಮಾರ್ಗದರ್ಶಕರಾಗಿ ಹೊರಟರು. ಕರಜಗೆಯಿಂದ

ಸೊಲ್ಲಾಪುರದವರೆಗೆ ೩೬ ಕಿ.ಮೀ. ದೂರದ ಅಂತರ. ಮಾರ್ಗದರ್ಶಕ ಶ್ರೀಗಳೀರ್ವರೂ ಎದುರು ಬರುತ್ತಿದ್ದ ವಾಹನಗಳಿಗೆ ದಾರಿಬಿಡಿಸುತ್ತ ನಮ್ಮ ವಾಹನದ ಸಂಚಾರ ಸುಗಮಕ್ಕೆ ಕಾರಣರಾದರು. ನಾವು ನೇರವಾಗಿ ಶ್ರೀ ಕಿರೀಟೇಶ್ವರಮಠಕ್ಕೆ ಹೋದೆವು. ಮಂಗಳವಾದ್ಯಗಳೊಡನೆ ಪೂಜ್ಯರಿಗೆ ಸ್ವಾಗತ ನೀಡಲಾಯಿತು. ಶ್ರೀಮಠದಲ್ಲಿ ಶ್ರೀಗಳವರ ಪಾದಪೂಜೆ ನಡೆಯಿತು. ನಂತರ ಸೊಲ್ಲಾಪುರದ ಸ್ಥಳೀಯ ಶಾಸಕರ (ಹೆಸರು ಮರೆತಿದೆ) ನೂತನ ಗೃಹಪ್ರವೇಶ ಸಮಾರಂಭ. ಅವರ ಆಮಂತ್ರಣದ ಮೇರೆಗೆ ಅಲ್ಲಿಗೂ ಹೋದೆವು. ಅಭೂತಪೂರ್ವ ಸ್ವಾಗತನೀಡಿದರು. ಸಾವಿರಾರು ಮಂದಿ ಭಕ್ತಿಯಿಂದ ಇದ್ದ ಕಡೆಯಿಂದ ಬಾಗಿ ನಮಸ್ಕರಿಸಿದರು. ಕಾಲುಮುಟ್ಟಿದ್ದರು, ಸಾಷ್ಟಾಂಗ ಹಾಕಿದರು. ಜಯಕಾರ ಮಾಡಿದರು. ಹೊಸಮನೆ ಅದೊಂದು ಅರಮನೆ ಭವ್ಯಮಂದಿರ. ಒಳಗೆ ಪೂಜಾಗೃಹ. ಹೋಮಕಂಡವಿದ್ದ ಜಾಗ. ಅಲ್ಲಿ ಪೀಠದ ಮೇಲೆ ಪೂಜ್ಯ ಶ್ರೀಗಳವರನ್ನು ಕುಳ್ಳಿರಿಸಿದರು. ದೊಡ್ಡ ಬೆಳ್ಳಿಯ ಹರಿವಾಣದಲ್ಲಿ ಶಾಸಕ ದಂಪತಿಗಳು ಶ್ರೀಗೆಳವರ ಪಾದಾಭಿಷೇಕಮಾಡಿ, ಕಾಣಿಕೆ ಸಮರ್ಪಿಸಿ ನಮಸ್ಕಾರ ಮಾಡಿ *''ನಮ್ಮ ಭಾಗ್ಯ – ಶಿವನ ದರ್ಶನವಾಯಿತು''* ಎಂದು ಭಕ್ತಿ ನುಡಿಯನ್ನಾಡಿದರು. ಬಂಧು-ಬಳಗದವರು ನಮಸ್ಕಾರಮಾಡಿದನಂತರ ಬೀಳ್ಕೊಟ್ಟರು. ಕಾರು ಸೊಲ್ಲಾಪುರ ದಿಂದ ಬಿಜಾಪುರಮುಖಿಯವಾಗಿ ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಮುಂದೋಡುವಂತೆ ಕಿರೀಟೇಶ್ವರ ಮಠದ ಶ್ರೀಗಳು ಮತ್ತು ನಾಗಣಸೂರ ಶ್ರೀಗಳು ಜೊತೆಗೆ ಬಂದು ಸೊಲ್ಲಾಪುರದ ಹೊರವಲಯದಲ್ಲಿ ಕಳುಹಿಸಿಕೊಟ್ಟರು – ಸೇವಾಶೀಲಸ್ವಾಮಿಗಳು. ಪರಮಪೂಜ್ಯರ ಬಗ್ಗೆ ಅಪಾರ ಭಕ್ತಿಶ್ರದ್ಧೆಗಳವರಿಗೆ.

ನಮ್ಮ ಕಾರು ರಾಷ್ಟ್ರೀಯ ಹೆದ್ದಾರಿ ೧೩ರಲ್ಲಿ ಮುಂದೆ ಸಾಗಿ ಇಂಡಿಯ ಕಡೆಗೆ ಚಲಿಸಿತು. ದಾರಿ ಸುಗಮವಾಗಿರಲಿಲ್ಲ. ಮಧ್ಯೆ ಒಂದೆರಡು ಕಡೆ ತೀರಾ ಹದಗೆಟ್ಟಿತ್ತು. ಮುಂದುವರಿದಾಗ ಇಂಡಿ ರೈಲ್ವೆಗೇಟ್ ಬಳಿ ದಾರಿ ಸುತ್ತಬೇಕಾಯಿತು. ಕರಜಿಗೆಗೆ ಬಂದಿದ್ದ ಭಕ್ತಾದಿಗಳು ಮಾರ್ಗದರ್ಶನಮಾಡಿದರು. ಇಂಡಿಗೆ ಬಂದಾಗ ಸಂಜೆ ನಾಲ್ಕು ಗಂಟೆಯಾಗಿತ್ತು. ಅಲ್ಲಿಂದ ೨೭ ಕಿ.ಮೀ. ದೂರ ರೋಡಗಿ ಗ್ರಾಮ ಆ ರಸ್ತೆಯೂ ಅಷ್ಟಕಷ್ಟೇ. ಏನೇನೂ ಸುಖವಿಲ್ಲ, ಮುಖ್ಯರಸ್ತೆಯಿಂದ ಕವಲೊಡೆದು ರೋಡಗಿಗೆ ಹೊರಟೆವು. ಆರು ಕಿ.ಮೀ. ದೂರ ಕ್ರಮಿಸಬೇಕಾದ ಮಣ್ಣಿನ ರಸ್ತೆಯಲ್ಲಿ ಸಾಕಾಗಿ ಹೋಯಿತು. ಡ್ರೈವರ್ ರಾಜುವಂತೂ ಅತ್ಯಂತ ಜಾಗರೂಕತೆಯಿಂದ ಮೆಲುಗತಿಯಲ್ಲಿ ಕಾರು ನಡೆಸಿ ಗ್ರಾಮಮುಟ್ಟಿಸಿದಾಗ ಆಶ್ಚರ್ಯ ಕಾದಿತ್ತು! ಮಂಗಳವಾದ್ಯ, ಪೂರ್ಣಕುಂಭ, ಕಲಶ ಕನ್ನಡಿಗಳೊಂದಿಗೆ ಗ್ರಾಮ ಬಂಧುಗಳು ತಾಯಂದಿರು ಬೆಳಗಿನ ಹತ್ತು ಘಂಟೆಯಿಂದ ಕಾದು ನಿಂತಿದ್ದರು. ಅವರಿಗೆ ಬೇಸರವಿರಲಿಲ್ಲ. ಸ್ವಾಮಿಗಳು ಬಂದದ್ದು ಎಲ್ಲಿಲ್ಲದ ಸಂತೋಷವುಂಟಮಾಡಿತ್ತು. ಉತ್ಸವದೊಡನೆ ಶ್ರೀ ಶಿವಲಿಂಗೇಶ್ವರ ವಿರಕ್ತ ಮಠಕ್ಕೆ ಶ್ರೀಗಳವನ್ನು ಸ್ವಾಗತಿಸಿದ ಗ್ರಾಮೀಣರ ಸಂಭ್ರಮ ಅದ್ಭುತವಾಗಿತ್ತು.

ಪರಮ ಪೂಜ್ಯರ ಪಾದಸ್ಪರ್ಶದಿಂದ ನಮ್ಮ ರೋಡಗಿ ಮಠ ಪಾವನಾಯಿತು. ದರ್ಶನಭಾಗ್ಯವನ್ನು ಕರುಣಿಸಿ ನಮ್ಮನ್ನೆಲ್ಲಾ ಕೃತಾರ್ಥರನ್ನಾಗಿಸಿದ್ದಾರೆ. ಭಕ್ತಿ ಶ್ರದ್ಧೆಗಳಿಂದ ಪೂಜ್ಯಪಾದರನ್ನು ಸ್ವಾಗತಿಸುತ್ತೇನೆ ಎಂದು ಶಿಕ್ಷಕ ಬಂಧುಗಳೋರ್ವರು ಸ್ವಾಗತ ಭಾಷಣ ಮಾಡಿದರು. ಗುಲ್ಬರ್ಗಾ ಶ್ರೀಗಳೆಂದೇ ಹೆಸರಾದ ಪೂಜ್ಯ ಶ್ರೀ ಕರುಣೇಶ್ವರ ಸ್ವಾಮಿಗಳ ಆಶೀರ್ವಚನದ ನಂತರ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ನೀಡಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಸಭೆಯನ್ನುದ್ದೇಸಿಸಿ ಆಶೀರ್ವಚನ ನೀಡುತ್ತ ''ನಮ್ಮಲ್ಲಿ ಇಂದು ಮಾನವ ಪ್ರಜ್ಞೆ ಬೆಳೆಯಬೇಕಾಗಿದೆ. ಕಾಯಕ – ದಾಸೋಹತತ್ವಗಳು ಅರಳಬೇಕಾಗಿದೆ, ಬಸವಣ್ಣನವರು ಆಚರಿಸಿ ತೋರಿಸಿದ ಜೀವನ ಮತ್ತೆ ಎದ್ದು ಬರಬೇಕಾಗಿದೆ, ಕುಡಿತದ ಹಾವಳಿಯಿಂದ ಗ್ರಾಮಜೀವನ ಅಧೋಗತಿಯತ್ತ ನಡೆದಿದೆ, ಭಕ್ತಿಮಾರ್ಗ ಕಣ್ಮರೆಯಾಗುತ್ತಿದೆ, ಗ್ರಾಮೀಣರ ಹೃದಯಗಳನ್ನು ಹಸನಾಗಿವೆ, ಅವು ಕಶ್ಮಲಗೊಳ್ಳುವ ಮೊದಲು ಎಚ್ಚರಗೊಳ್ಳುವ ಆವಶ್ಯಕತೆಯಿದೆ ಎನ್ನುತ್ತ, ಶ್ರೀಮಠದ ಪುನರುಜ್ಜೀವನ ಮಾಡುವ ಜವಾಬ್ದಾರಿ ಭಕ್ತರದಾಗಿದೆ, ಮಠದ ಶ್ರೀಗಳು ಮುಗ್ಧರು, ಸರಳ ಜೀವನ ಅವರದು, ನಮ್ಮ ಮಠದಲ್ಲಿ ಅಭ್ಯಾಸ ಮಾಡುತ್ತಿದ್ದಾರೆ'' ಎಂದು ನುಡಿದರು. ಸಭೆಯಲ್ಲಿ ಶ್ರೀಮಠದ ಹಿರಿಯ ಶ್ರೀಗಳಾದ ಪೂಜ್ಯ ಶ್ರೀ ಶಿವಮೂರ್ತಿಸ್ವಾಮಿಗಳು ಆಸೀನರಾಗಿದ್ದರು. ಕಿರಿಯ ಶ್ರೀಗಳಾದ ಪೂಜ್ಯಶ್ರೀ ಮಡಿವಾಳೇಶ್ವರ ಸ್ವಾಮಿಗಳು ಆಶೀರ್ವಚನ ನೀಡಿದರು. ಅದೊಂದು ಆಕಸ್ಮಿಕ ಸಭೆಯ ಎನಿಸಿತಾದರೂ ಅವಿಸ್ಮರಣೀಯವಾಯಿತು.

ಸಂಜೆ ಆರೂವರೆ ಘಂಟೆಯ ವೇಳೆ ಸಭಾ ಕಾರ್ಯಕ್ರಮ ಮುಗಿದ ನಂತರ ಶ್ರೀಗಳವರ ಪೂಜೆ ಪ್ರಸಾದ ಮುಗಿಸಿಕೊಂಡು ಏಳೂವರೆ ವೇಳೆಗೆ ಶ್ರೀ ಸಿದ್ಧಗಂಗಾ ಮಠಕ್ಕೆ ಪ್ರಯಾಣ ಆರಂಭಿಸಿದೆವು.

ಕಾರುನಂಬರ್ ೧೦೦ರಲ್ಲಿ ಪೂಜ್ಯ ಶ್ರೀ ಹೊನ್ನಮ್ಮ ಗವಿ ಮಠದ ಶ್ರೀಗಳು, ಪೂಜ್ಯ ಶ್ರೀ ಅಂಕನಹಳ್ಳಿಮಠದ ಶ್ರೀಗಳು ಮತ್ತು ಶ್ರೀ ಬಸವರಾಜು ಪ್ರಯಾಣ ಪ್ರಾರಂಭಿಸಿದರು.





ಪರಮ ಪೂಜ್ಯ ಶ್ರೀಗಳವರ ಕಾರಿನಲ್ಲಿ ಶ್ರೀ ಬಿ. ಚಂದ್ರಶೇಖರ್, ಲೇಖಕ ಶ್ರೀಗಳವರೊಡನೆ ಹೊರಟೆವು. ದಾರಿ ಮಧ್ಯೆ ಶ್ರೀಗಳವರ ಪಾದಪೂಜೆ ನಡೆಯಿತು ಭಕ್ತಾದಿಗಳಿಂದ ಮುಂದುವರಿದೆವು. ಇಂಡಿಗೆ ಬಂದೆವು. ೧೦೧ ನಂಬರಿನ ಕಾರು ಮುಂದೆ ಹೋಯಿತು. ನಾವು ಝಳಕಿ ಮಾರ್ಗವಾಗಿ ಬಿಜಾಪುರದ ಹೆದ್ದಾರಿಗೆ ಬಂದು ಎನ್.ಎಚ್. ೧೩ರಲ್ಲಿ ಸಾಗಿದೆವು. ಬಿಜಾಪುರದ ಪೆಟ್ರೋಲ್ ಬಂಕ್ ಬಳಿ ನಮ್ಮ ಮತ್ತೊಂದು ಕಾರು ನಿಂತಿತ್ತು. ಡ್ರೈವರ್ ಶ್ರೀ ಮಹಾದೇವಸ್ವಾಮಿಗೆ ಮಾರ್ಗದರ್ಶನ ಮಾತುಗಳನ್ನು ಹೇಳಿ ಹೊರಟಾಗ ರಾತ್ರಿ ೯.೩೦ ಆಗಿತ್ತು.

ಮಠಮಾನ್ಯಗಳು ಸಮಾಜಕ್ಕಾಗಿ ಶ್ರಮಿಸುತ್ತಿರುವುದನ್ನು ಶ್ರೀಗಳವರು ಹೇಳುತ್ತಿದ್ದರು. ಬಸವಣ್ಣನವರ ವ್ಯಕ್ತಿತ್ವದ ಹಿರಿಮೆಯನ್ನು ಕುರಿತು ಹೇಳಿದರು. ಸಿದ್ಧರಾಮ ಶಿವಯೋಗಿಯ ಕರ್ಮಯೋಗದ ರಹಸ್ಯವನ್ನು ತಿಳಿಸಿದರು. ಬಸವೇಶ್ವರ ನಾಟಕದತ್ತ ಮಾತು ಹೊರಳಿತು. ಶಿಕ್ಷಕರ ಸಹಕಾರ ದೊಡ್ಡದೆಂದರು. ಅವರು ಇನ್ನಿಷ್ಟು ತೊಡಗಿದ್ದಾದರೆ ಪರಿಣಾಮ ಚೆನ್ನಾಗಿರುತ್ತದೆ ಎಂದು ಹೇಳುವುದನ್ನೂ ಮರೆಯಲಿಲ್ಲ. 'ರಂಗಸ್ವಾಮಿ ಮೇಕಪ್ ಮಾಡಿಕೊಂಡು ರಂಗಕ್ಕೆ ಬಂದರೆ ಯಾರೂ ಅವನನ್ನು ಹುಡುಗನೆನ್ನಲಾರರು. ಸಿದ್ಧಲಿಂಗಸ್ವಾಮಿಯೂ ಅಷ್ಟೆ. ಒಳ್ಳೆ ಸ್ವಭಾವದವರು' ಎಂದರು. ಪ್ರೇಮ ಕುಮಾರನನ್ನು ಹೆಣ್ಣೆಂದು ಪ್ರೇಕ್ಷಕರು ಭಾವಿಸುತ್ತಾರಲ್ಲವೇ? ಎಂದು ಪ್ರೀತಿ ವ್ಯಕ್ತಪಡಿಸಿದರು. ಕಾರು ಓಡುತ್ತಿತ್ತು. ತಂಗಾಳಿ ಬೀಸುತ್ತಿತ್ತು. ''ಎಲ್ಲಿದ್ದೇವೆ ಎಂದರು ಶ್ರೀಗಳು'' – ಕುಷ್ಟಗಿ ಬಳಿ ಹೋಗುತ್ತಿದ್ದೇವೆ ಬುದ್ಧಿ ಎಂದೆ. ನಾವು ನಿದ್ದೆ ಮಾಡುತ್ತಿರಲಿಲ್ಲ. ರಾಜು (ಡ್ರೈವರ್) ಎಚ್ಚರವಾಗಿ ಡ್ರೈವ್ ಮಾಡುತ್ತಿದ್ದ. ''ಕುಮಾರಸ್ವಾಮಿ ಚೆನ್ನಾಗಿ ಹಾಡುತ್ತಾನೆ, ಮಲ್ಲಿಕಾರ್ಜುನ್‌ಗೆ ಆಸಕ್ತಿಯಿದೆ, ಕಿನಕಳ್ಳಿ ಮಲ್ಲಿಕಾರ್ಜುನ ಯಾವ ಕೆಲಸ ಮಾಡಿದರೂ ಚೆನ್ನಾಗಿ ಮಾಡುತ್ತಾನೆ, ಸಿದ್ಧಲಿಂಗಯ್ಯ ಮಂಜಣ್ಣನ ಪಾತ್ರದಲ್ಲಿ ತಲ್ಲೀನರಾಗಿ ಬಿಡುತ್ತಾನೆ, ಸೋಮಶೇಖರ್ ಕೂಡ ಶ್ರದ್ಧೆಯಿಂದ ಮಾಡುತ್ತಾನೆ'' ಎಂದು ಮತ್ತೆ ಮಾತಿಗಾರಂಭಿಸಿದರು ಶ್ರೀಗಳು. ಕಾರಿನ ವೇಗಕ್ಕೆ ಮಾತುಗಳು ಸರಿಯಾಗಿ ಕೇಳಿಸುತ್ತಿರಲಿಲ್ಲ. ಮತ್ತೆ ಮತ್ತೆ 'ಏನ್ಬುದ್ದಿ' ಹೌದು ಬುದ್ದಿ, ಸರಿಬುದ್ಧಿ'' ಎನ್ನುತ್ತಿದ್ದೆ. ಕಾರು ಹೊಸಪೇಟೆ ದಾಟಿ ಮುಂದೆ ಸಾಗುತ್ತಿತ್ತು. ಸ್ವಲ್ಪ ಹೊತ್ತು ಶ್ರೀಗಳು ಕೂತಲ್ಲಿಯೇ ಕಣ್ಮುಚ್ಚಿ ನಿದ್ರಾಮುದ್ರಿತರಾದರು. *'ನಾಟಕ ತುಂಬಾ ಒಳ್ಳೆ ಪರಿಣಾಮ ಮಾಡುತ್ತೆ. ಬಸವಣ್ಣನವರನ್ನು ಗ್ರಾಮೀಣ ಬಂಧುಗಳ ಹತ್ತಿರಕ್ಕೆ ಕೊಂಡೊಯ್ಯುತ್ತೆ'* ಎನ್ನುತ್ತ ಹತ್ತು ನಿಮಿಷದನಂತರ ಎಚ್ಚರಗೊಂಡು ಪುನಃ ಮಾತಿಗೆ ತೊಡಗಿದರು. ಶ್ರೀಗಳವರು ನಿದ್ದೆಮಾಡುತ್ತಾರೋ, ಕಣ್ಮುಚ್ಚಿ ಧ್ಯಾನಲೀನರಾಗಿರುತ್ತಾರೋ ತಿಳಿಯವುದೇ ಕಷ್ಟ.

''ಮಠದಲ್ಲಿ ಪುಸ್ತಕ ಮಳಿಗೆ ಕಟ್ಟಿಸುತ್ತಿದ್ದೇವೆ, ಧಾರ್ಮಿಕ ಗ್ರಂಥಗಳ ಮಾರಾಟ ವ್ಯವಸ್ಥೆ ಮಾಡಬೇಕು. ಬಸವಾದಿ ಶರಣರು, ವೀರಶೈವ ಧರ್ಮಕ್ಕೆ ಸಂಬಂಧಿಸಿದ, ಬೇರೆ ಧರ್ಮದ ಗ್ರಂಥಗಳೂ ದೊರೆಯುವಂತೆ ನೋಡಿಕೊಳ್ಳಬೇಕು. ಅಲಭ್ಯ ಗ್ರಂಥಗಳನ್ನು ಮರು ಪ್ರಕಟಿಸುವ ಆಲೋಚನೆಯನ್ನು ಕೈಗೆತ್ತಿಕೊಳ್ಳಬೇಕು'' – ಎಂದು ಮಾತು ಮುಂದವರೆಸಿದರು. ''ಸೋಮಣ್ಣ ಇದಾನಲ್ಲ ತುಂಬಾ ಇನ್‌ವಾಲ್ವ್‌ಮೆಂಟ್ ಅವನದು. ಜವಳಿ ಅಂಗಡಿ ವಹಿವಾಟನ್ನು ದಕ್ಷವಾಗಿ ಮಾಡುವುದರ ಜೊತೆಗೆ ನಾಟಕದ ವಿಷಯದಲ್ಲಿ ಅಷ್ಟೇ ಶ್ರದ್ಧೆ'' ಎನ್ನುತ್ತ ಪುನಃ ನಿದ್ದೆ ಹೋದರು. ಚಿತ್ರದುರ್ಗದ ಬಳಿಗೆ ಬಂದೆವು. ಟ್ರಾಫಿಕ್ ತುಂಬಾ ದಟ್ಟವಾಗಿತ್ತು. ಲಾರಿಗಳ ಸಂಚಾರ ತುಂಬಾ ಸಾಗಿತ್ತು. ನಿದ್ದೆ ಎಳೆಯುತ್ತಿತ್ತು. ಕಣ್ಣುಮುಚ್ಚಿಕೊಳ್ಳುತ್ತಿದ್ದವು. ರಾಜು ಹಣ್ಣುಕೊಟ್ಟ, ಒಗ್ಗರಣೆ ಪುರಿ ಕೊಟ್ಟ ತಿಂದದ್ದಾಯಿತು. ನೀರು ಕುಡಿದೆ. ನಿದ್ದೆ ದೂರ ಸರಿಯಿತು. ಕರಜಿಗೆಗೆ ಬಂದದ್ದು ಒಳ್ಳೆಯದಾಯಿತು. ಜನರ ಭಕ್ತಿ ದೊಡ್ಡದು. ಮಠದ ಸ್ವಾಮಿಗಳು ಸರಳರು, ಸೇವಾಶ್ರದ್ಧೆಯುಳ್ಳವರು. ತುರುವೇಕೆರೆ ಶ್ರೀಗಳವರದೂ ಒಳ್ಳೆಯ ಮನಸ್ಸು, ಸ್ವಾಮಿಗಳಾದವರು ವ್ಯಕ್ತಿತ್ವ ಬೆಳೆಸಿಕೊಳ್ಳಬೇಕು, ಪೂಜಾನಿಷ್ಠೆ ಬೆಳೆಸಿಕೊಳ್ಳಬೇಕು ಅದು ಬಹು ದೊಡ್ಡ ಶಕ್ತಿ'' ಎಂದರು ಶ್ರೀಗಳು ಎಚ್ಚರಗೊಳ್ಳುತ್ತ 'ವರ್ಷಕ್ಕೊಮ್ಮೆಯಾದರೂ ಒಂದು ಮಂಡಲ ಅವಧಿ ಕ್ಷೇತ್ರಮಿತಿ ಹಾಕಿಕೊಳ್ಳಬೇಕೆಂದಿದ್ದೇನೆ. ಮಠದಲ್ಲೇ ಇದ್ದುಕೊಂಡು ಪೂಜೆ, ಅಧ್ಯಯನಗಳಲ್ಲಿ ತೊಡಗಬೇಕೆನಿಸುತ್ತಿದೆ'' – ಎಂದರು. ''ಮಂಡಲ ಅಂದರೆ ೪೦ ದಿನಗಳಲ್ಲಿವೇ ಬುದ್ಧಿ'' ಎಂದದ್ದಕ್ಕೆ ಹೌದು, ಯಾರನ್ನೂ ಬಿಟ್ಟುಕೊಳ್ಳದೆ, ಹಳೆಮಠದಲ್ಲೇ ಇದ್ದುಕೊಂಡು ಗ್ರಂಥಾವಲೋಕನ, ಲಿಂಗಪೂಜೆಯಷ್ಟರಲ್ಲಿಯೇ ಇರಬೇಕೆಂದುಕೊಂಡಿದ್ದೇನೆ'' ಎಂದರು. ''ಮಠದ ಸೇವಾಕಾರ್ಯಗಳು? ಎಂದದ್ದಕ್ಕೆ ಸ್ವಾಮಿಗಳು (ಕಿರಿಯ ಶ್ರೀಗಳು) ನೋಡಿಕೊಳ್ಳುತ್ತಾರೆ'' ಎಂದರು. ಕಾರು ತುಮಕೂರಿನ ಸಮೀಪ ಓಡುತ್ತಿತ್ತು. ಬೆಳಗಿನ ಜಾವ ೪.೩೦ಕ್ಕೆ ತುಮಕೂರಿಗೆ ಬಂದೆವು. ಶ್ರೀಗಳು ಶ್ರೀಮಠಕ್ಕೆ ತೆರಳಿದರು. ನಾನು ಗೌ॥ ಕಾಲೇಜು ಬಳಿ ಇಳಿದು ಮನೆಕಡೆ ಹೆಜ್ಜೆ ಹಾಕಿದೆ.

❋

# ಶ್ರೀ ಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಜಾತ್ರೆ – ಒಂದು ವರದಿ



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ರಥೋತ್ಸವದ ಮುಂದೆ ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಹರಗುರು ಚರಮೂರ್ತಿಗಳು

ಸಾಂಸ್ಕೃತಿಕ ಜೀವನದ ಉತ್ಸಾಹ ಮುಖಿಗಳಾದ ಜಾತ್ರೆಗಳು ಭಕ್ತಿಶ್ರದ್ಧೆಪ್ರೀತಿಗಳ ಪರ್ಯಾಯ ಪುಟಗಳು. ಒಂದು ನಾಡಿನ ಇತಿಹಾಸದ ಅನಭಿಷಿಕ್ತ ಆಚರಣೆಗಳು. ಧಾರ್ಮಿಕ ತಳಹದಿಯ ಮೇಲೆ ನಡೆದು ಬಂದ ಸಂತೋಷದ ಸಮಾವೇಶಗಳು. ಕರ್ನಾಟಕದಲ್ಲಂತೂ ಉದ್ದಗಲದಲ್ಲಿ ವರ್ಷದುದ್ದಕ್ಕೂ ಒಂದಲ್ಲ ಒಂದು ಜಾತ್ರೆ ನಡೆದೇ ಇರುತ್ತದೆ. ಒಂದೊಂದು ಜಾತ್ರೆಗೂ ಒಂದೊಂದು ಸ್ಥಳ ಪುರಾಣ, ಐತಿಹ್ಯ, ಕಾರಣಗಳಿರುತ್ತವೆ. ಕೆಲವು ಬಲಿಕೊಡುವ ಉಗ್ರರೂಪದವು ಗಳಾದರೆ







ರಥೋತ್ಸವಕ್ಕೆ ದಿವ್ಯಹಸ್ತದಿಂದ ಚಾಲನೆ ನೀಡುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳವರು



ಶೇಷವಾಹನ

## ರಥೋತ್ಸವ

ಶ್ರೀ ಸಿದ್ಧಗಂಗಾ ಮಠದಲ್ಲಿ ದಿನಾಂಕ ೨೨-೨-೨೦೦೧ ಗುರುವಾರದಂದು ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ವೈಭವದ ರಥೋತ್ಸವ ನಡೆಯಿತು. ನಾಡಿನ ಮೂಲೆ ಮೂಲೆಗಳಿಂದ ಬಂದಿದ್ದ ಸುಮಾರು ೫೦ ಸಹಸ್ರಕ್ಕೂ ಹೆಚ್ಚು ಭಕ್ತಾದಿಗಳು ರಥೋತ್ಸವ ಮಂಗಳ ಕಾರ್ಯದಲ್ಲಿ ಭಾಗಿಗಳಾಗಿ ಭಕ್ತಿಸಮರ್ಪಣೆಯನ್ನು ಸಲ್ಲಿಸಿದರು. ಧಾರ್ಮಿಕ ಜನಪದ ಕಲೆಗಳಾದ ನಂದಿಧ್ವಜ, ವೀರಗಾಸೆ, ಮಂಗಳವಾದ್ಯಗಳು ಹಾಗೂ ಮಕರ ತೋರಣ, ಕಲಶ-ಕನ್ನಡಿ, ಶಿವಲಾಂಛನಗಳೊಂದಿಗೆ ೧೧.೪೦ಕ್ಕೆ ಪ್ರಾರಂಭವಾದ ರಥೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ವಿದ್ಯುಕ್ತವಾಗಿ ಚಾಲನೆಗೊಳಿಸಿದರು. ಅನೇಕ ಹರ-ಗುರುಚರಮೂರ್ತಿಗಳು, ರಥೋತ್ಸವದಲ್ಲಿ ಭಾಗಿಗಳಾಗುವ ಮೂಲಕ ಕಾರ್ಯಕ್ರಮಕ್ಕೆ ಪಾವಿತ್ರತೆಯನ್ನು ತಂದು ಕೊಟ್ಟರು. ಭಕ್ತಾದಿಗಳು ತಮ್ಮ ಭಕ್ತಿಯ ಸಾಂಕೇತಿಕ ಕುರುಹಾಗಿ ದವನ ಬಾಳೆಹಣ್ಣುಗಳನ್ನು ಭಕ್ತಿಯಿಂದ ಎಸೆಯುತ್ತಿದ್ದುದು ಆಕರ್ಷಕವಾಗಿ ಕಾಣುತ್ತಿದ್ದಿತು. ಜೊತೆಗೆ ಮದ್ದಿನ ಪ್ರದರ್ಶನವು ನಡೆಯಿತು. ಬಿಸಿಲಿನ ಜಳಕ್ಕೆ ಬಾಯಾರಿದ ಭಕ್ತರಿಗೆ ತಂಪು ಪಾನೀಯವನ್ನು ನೀಡುವ ವ್ಯವಸ್ಥೆ ಮಾಡಲಾಗಿಗಿತ್ತು.

''ರಥೋತ್ಸವ ಜೀವನೋತ್ಸವವದ ಒಂದು ಸಾಂಕೇತಿಕ ಸಮಾರಂಭ. ರಾಷ್ಟ್ರದ ಭಾವೈಕ್ಯತೆಯ ಪ್ರತೀಕ. ಭಕ್ತಿ, ಸೇವೆ, ತ್ಯಾಗಗಳ ಸಂಕಲ್ಪ, ಸಾಕಾರಗೊಳ್ಳುವ ಆಚರಣೆ, ಮಾನವೀಯತೆಯನ್ನು ಪ್ರದರ್ಶಿಸುವ ಮಹಾಮಂಗಳ ಮಣಿಹ'' ಎಂಬುದಾಗಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಸಂದೇಶ ನೀಡಿದರು. ಜನಸಾಗರದ ಮಧ್ಯೆ ಭಕ್ತಿಯ ಜಯಘೋಷಗಳ ನಡುವೆ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ರಥೋತ್ಸವ ವಿಜೃಂಭಣೆಯಿಂದ ನಡೆಯಿತು. ಧನ್ಯ ಮಿಲನ ಸಮಾರಂಭವೆನಿಸಿ ಸಂತೋಷವನ್ನುಂಟು ಮಾಡಿತು.



ರಾವಣ ವಾಹನ



ಜಾತ್ರೆಯಲ್ಲಿ ಜನಸಾಗರ

ಮತ್ತೆ ಕೆಲವು ಸೌಮ್ಯ ರೂಪದವುಗಳಾಗಿವೆ. ಇತ್ತೀಚಿನ ದಿನಗಳಲ್ಲಿ ಜಾತ್ರೆಗಳು ಮನರಂಜನೆ, ಜಾಗೃತಿ ಸಮಾವೇಶ ಗಳಾಗುತ್ತಿರುವುದು ಶುಭೋದಯ.

ಶ್ರೀಮಠದಲ್ಲಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿಯ ಜಾತ್ರೆಗೆ ಒಂದೂ ನೂರು ವರ್ಷಗಳ ಇತಿಹಾಸವಿದೆ. ಲಿಂಗೈಕ್ಯ ಪರಮಪೂಜ್ಯ ಶ್ರೀ ಉದ್ದಾನಸ್ವಾಮಿಗಳವರ ದಿವ್ಯಸಂಕಲ್ಪದಂತೆ ಪ್ರಾರಂಭವಾದ ಈ ಜಾತ್ರೆ ವೈಶಿಷ್ಟ್ಯಪೂರ್ಣವಾಗಿ, ವೈವಿಧ್ಯಮಯವಾಗಿ, ವೈಭವೋಪೇತವಾಗಿ, ಭಾರತೀಯ ಸಂಸ್ಕೃತಿಯ ಆಧ್ಯಾತ್ಮಿಕ ಹೂರಣವನ್ನಿಟ್ಟು ಚಲನಶೀಲವಾದ ಜಂಗಮರೂ ಸಮಾಜಕ್ಕೆ ಆತ್ಮಸಂತೋಷವನ್ನು ನೀಡುತ್ತ ಬಂದಿದೆ. ಈ ಜಾತ್ರೆಯಲ್ಲಿ ದಾಸೋಹದ ಮಹಾಮಣಿಹ ಅರಳುವುದನ್ನು ನೋಡುವುದೇ ಒಂದು ಪುಣ್ಯ. ಅನ್ನ, ಅರಿವು, ಅನುಭಾವಗಳ ತ್ರಿವಿಧ ದಾಸೋಹದಲ್ಲಿ ಪರಿಪೂರ್ಣ ಅವಕಾಶ. ಕೇವಲ ಜನಸಮುದಾಯಕ್ಕಲ್ಲ, ಜಾನುವಾರು ಲೋಕಕ್ಕೂ ದಾಸೋಹದ ಸೇವೆ ಇಲ್ಲಿ ಲಭ್ಯ. ಹಳ್ಳಿಗ, ನಗರದವ, ಕಲಿತವ, ಕಲಿಯದವ, ಹಿರಿಯ, ಕಿರಿಯ, ಗಂಡು, ಹೆಣ್ಣು, ಜಾತಿ, ಕುಲ, ಕೋಮು, ಪಂಗಡ, ಪಕ್ಷಗಳೆನ್ನದೆ 'ಭಕ್ತಿಪಕ್ಷ'ದ ಜಾತ್ರೆ ಸಿದ್ಧಗಂಗಾ ಮಠದ ಜಾತ್ರೆ ಉತ್ಸವಗಳು, ಜಾನುವಾರು ಮೆರವಣಿಗೆಗಳು, ಧರ್ಮಪ್ರವಚನಗಳು, ದೀಕ್ಷೆ ಮುಂತಾದ ವಿಧಿಗಳು, ವಸ್ತು ಪ್ರದರ್ಶನ, ಸಾಂಸ್ಕೃತಿಕ ಚಟುವಟಿಕೆಗಳಾದ ನಾಟಕ, ನೃತ್ಯ, ಸಂಗೀತ, ಕಥಾಕಾಲ ಕ್ಷೇಪಗಳು ಎಡೆಬಿಡದೆ ನಡೆದಿರುತ್ತವೆ. ಮಠಕ್ಕೆ ಮಠವೇ ಮೈಯೆಲ್ಲಾ ಕಣ್ಣಾಗಿ, ಕಿವಿಯಾಗಿ, ಬಾಯಾಗಿ ಸೇವೆಯಲ್ಲಿ ತೊಡಗಿರುತ್ತದೆ. ವರ್ಷಕ್ಕೊಮ್ಮೆ ನವಚೇತನದುಂಬಿ ಲೋಕ ಕಲ್ಯಾಣದಲ್ಲಿ ಆತ್ಮಕಲ್ಯಾಣ ಕಾಣುವ ಭಾಗ್ಯ ನೀಡುವ ಶ್ರೀಮಠದ ಜಾತ್ರೆಯ ಪ್ರಾಣ ಜೀವಾಳ ಪರಮ ಪೂಜ್ಯ ಶ್ರೀ । ಮ ॥ ನಿ ॥ ಪ್ರ ॥ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನೋತ್ಸಾಹ ಅನುಪಮವಾದದ್ದು; ಅನನ್ಯವಾದದ್ದು. ತೊಂಬತ್ತೂರರ ತುಂಬು ವಯಸ್ಸಿನಲ್ಲಿ ಮಿಂಚಿನಂತೆ ನಡೆದಾಡುವ ಪೂಜ್ಯ ಶ್ರೀಗಳವರು 'ಯುಗದ ಉತ್ಸಾಹ'ವೇ ಆಗಿದ್ದು ವಿಚಾರಿಗಳಿಗೆ ಸ್ಫೂರ್ತಿಯಾಗಿದ್ದಾರೆ; ಅವಿರಳ ರಾಷ್ಟ್ರರತ್ನರೆನಿಸಿದ್ದಾರೆ.







ಜಾತ್ರೆಯಲ್ಲಿ ರಾಸುಗಳ ಒಂದು ನೋಟ





ದಾಸೋಹ ಸಿದ್ಧತೆಯನ್ನು ಪರಿಶೀಲಿಸುತ್ತಿರುವ ಪರಮಪೂಜ್ಯ ಶ್ರೀ ಶ್ರೀಗಳವರು

ಜಾತ್ರೆಯ ಅಂಗವಾಗಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ೧೨.೨.೨೦೦೧ ರಂದು ರಾಜ್ಯದ ಕಂದಾಯ ಸಚಿವರಾದ ಶ್ರೀ ಹೆಚ್.ಸಿ. ಶ್ರೀಕಂಠಯ್ಯನವರಿಂದ ಉದ್ಘಾಟಿತವಾಯಿತು. ೨೬.೨.೨೦೦೧ರಂದು ರಾಜ್ಯದ ಉನ್ನತ ಶಿಕ್ಷಣ ಸಚಿವರಾದ ಡಾ॥ ಜಿ. ಪರಮೇಶ್ವರ್ ಅವರಿಂದ ಸಮಾರೋಪ ಭಾಷಣದೊಡನೆ ಮುಕ್ತಾಯಗೊಂಡಿತು. ವಸ್ತುಪ್ರದರ್ಶನದಲ್ಲಿ ರಾಜ್ಯದ, ಕೇಂದ್ರದ ಮತ್ತು ಖಾಸಗಿಯವರಿಂದದ ೧೧೫ ಮಳಿಗೆಗಳು ಪ್ರದರ್ಶನ ನೀಡಿದವು. ಪ್ರಗತಿಯ ಪರಿಚಯವನ್ನು ದಿಗ್ದರ್ಶಿಸಿದವು. ಕೃಷಿ ಮತ್ತು ಅರಣ್ಯ ಹಾಗೂ ಎಚ್.ಎಂ.ಟಿ.ಗಳು ಉತ್ತಮವೆಂದು ಪುರಸ್ಕೃತಗೊಂಡವು. ಪ್ರತಿದಿನ ಸಾಂಸ್ಕೃತಿಕ ಕಾರ್ಯಕ್ರಮ ಜನತೆಯನ್ನು ಸಂತೋಷಗೊಳಿಸಿದವು.

ದಿನಾಂಕ ೧೪.೨.೨೦೦೧ರಿಂದ ದೇವರ ಉತ್ಸಗಳು ಆರಂಭವಾದವು. ೧೪.೨.೨೦೦೧ರ ಪ್ರಾತಃಕಾಲ ಶ್ರೀ ಮಠದ ಮೂಲಪುರುಷರಾದ ಶ್ರೀ ಗೋಸಲ ಸಿದ್ಧೇಶ್ವರರ ಉತ್ಸವವಾಯಿತು. ಅಂದು ಸಂಜೆ ಶ್ರೀ ಸಿದ್ಧಲಿಂಗೇಶ್ವರರ



ನಂದಿವಾಹನ

## ವೈಭವದ ಬೆಳ್ಳಿಪಾಲಕಿ ಉತ್ಸವ

ಶ್ರೀ ಸಿದ್ಧಗಂಗಾ ಮಠದಲ್ಲಿ ದಿನಾಂಕ ೨೩.೨.೨೦೦೦ನೇ ಶುಕ್ರವಾರದಂದು ನೂತನವಾಗಿ ನಿರ್ಮಿತವಾದ ಬೆಳ್ಳಿಪಾಲಕಿ ಮಹೋತ್ಸವ ಅಭೂತಪೂರ್ವವಾಗಿ ಜರುಗಿತು. ಲಕ್ಷಾಂತರ ಮಂದಿ ಭಕ್ತಾದಿಗಳು ಉತ್ಸವದಲ್ಲಿ ಭಾಗಿಗಳಾಗಿ ಧನ್ಯರಾದರು.

ಝುಗಝುಗಿಸುವ ವಿದ್ಯುತ್ ದೀಪದ ಅಲಂಕರಣದ ಅಂಗಳದಲ್ಲಿ ಪುಷ್ಪಾದಿಗಳಿಂದ ಸಿಂಗರಿಸಲ್ಪಟ್ಟ ಬೆಳ್ಳಿಪಾಲಕಿ ಉತ್ಸವ ಪ್ರಾರಂಭವಾದ ಸಂದರ್ಭದಲ್ಲಿ ಭಕ್ತಾದಿಗಳ ಜಯಘೋಷ ಮುಗಿಲುಮುಟ್ಟಿತು. ಭೂಲೋಕವೇ ಕೈಲಾಸವಾಯಿತೇನೋ ಎಂಬಂತೆ ಶಿವಬೆಳಕನ್ನು ಚೆಲ್ಲಿದ ಬೆಳ್ಳಿಪಾಲಕಿ ಉತ್ಸವ ಅತ್ಯಾನಂದವನ್ನುಂಟು ಮಾಡಿತು. ಸಮಾರಂಭದ ಅಂಗವಾಗಿ ಬಾಣ ಬಿರುಸುಗಳ ಮದ್ದಿನ ಪ್ರದರ್ಶನ ಭಕ್ತಾದಿಗಳ ಮನಸ್ಸನ್ನು ಆಕರ್ಷಿಸಿತು. ವಯೋವೃದ್ಧ ೮೦ ವರ್ಷದ ಮುದುಕನೊಬ್ಬ "ಎಲ್ಲಾ ಮಹಾಸ್ವಾಮಿ ಗಳವರ ಪವಾಡ ನಡೆದಿದೆ" ಎಂಬ ಮಾತು ವರದಿಗಾರನಿಗೆ ಕೇಳಿಸಿತು.

ಬೆಳ್ಳಿ ಪಾಲಕಿ ಉತ್ಸವವನ್ನು ನೋಡಲು ಆಗಮಿಸಿದ್ದ ಭಕ್ತಾಭಿಮಾನಿಗಳನ್ನುದ್ದೇಶಿಸಿ "ಸಾಂಸ್ಕೃತಿಕ ಜೀವನದ ಮಂಗಳ ಮುಖಗಳಾದ ಉತ್ಸವಗಳು ಜನಜೀವನದ ನವ ಚೇತನವನ್ನು ನೀಡುವ ಘಟನೆಗಳು ಭಕ್ತಿ, ಶ್ರದ್ಧೆ ಸೇವೆಯನ್ನು ಉದ್ದೀಪಿಸುವ ಸನ್ನಿವೇಶಗಳು. ಜಾತ್ರೆ, ಉತ್ಸವಗಳು ಭಾವೈಕ್ಯತೆ ಸಮಾವೇಶಗಳು. ಜೀವನ ಪ್ರೀತಿಯನ್ನು ವಿಸ್ತರಿಸುವ ಪುನರುಜ್ಜೀವನ ಗೊಳಿಸುವ ಚಟುವಟಿಕೆಗಳು. ಬೇಸತ್ತ ಬದುಕಿಗೆ ಸಂಜೀವಿನಿಯಾಗಿ ಉಲ್ಲಾಸವನ್ನು ತುಂಬುವ ಹಬ್ಬಗಳು, ಯಾವುದೇ ವಿಧವಾದ ಭಿನ್ನಭಾವವಿಲ್ಲದ ಮಾನವ ಪ್ರಜ್ಞೆಯ ಸಮ್ಮೇಳನಗಳು, ಮನಸ್ಸು ಬೆಳ್ಳಿಯಂತೆ ಶುಭ್ರವಾಗಿ ಬಂಗಾರದಂತೆ ಬೆಲೆ ಭರಿತವಾಗಿ ಹೂವಿನಂತೆ ಸುವಾಸಿತವಾಗಿ ರೂಪುಗೊಳ್ಳಬೇಕೆಂಬುದೇ ಬೆಳ್ಳಿಪಾಲಕಿ ಉತ್ಸವದ ಸಂದೇಶ" ಎಂಬುದಾಗಿ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು ಆಶೀರ್ವಚನ ನೀಡಿದರು.



ದಾಸೋಹವನ್ನು ಸ್ವೀಕರಿಸುತ್ತಿರುವ ಭಕ್ತಾದಿಗಳು



ಬೆಳ್ಳಿ ಪಾಲಕ್ಕಿ ಉತ್ಸವದಲ್ಲಿ ಶ್ರೀ ಶ್ರೀಗಳವರು



ತೆಪ್ಪೋತ್ಸವ








ಉತ್ತಮ ರಾಸುಗಳಿಗೆ ಬಹುಮಾನ ವಿತರಣ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ವೃಷಭವಾಹನ, ರಾವಣ ವಾಹನ ಉತ್ಸವಗಳಾದವು. ಅಂದಿನಿಂದ ಕ್ರಮವಾಗಿ ಸಿಂಹವಾಹನ, ಗಜವಾಹನ, ಹುಲಿವಾಹನ, ನಂದಿವಾಹನ, ಅಶ್ವವಾಹನ, ನವರಂಗ ಪಾಲಕಿ ಉತ್ಸವ, ಹುತ್ತದ ವಾಹನ, ನವಿಲು ವಾಹನ, ಶೇಷವಾಹನ, ಬಿಲ್ವವೃಕ್ಷವಾಹನ, ಮಹಾಶಿವರಾತ್ರಿ ಆಚರಣೆ ಮುತ್ತಿನ ಪಲ್ಲಕ್ಕಿ ಉತ್ಸವ, ರಥೋತ್ಸವ, ರುದ್ರಾಕ್ಷಿ ಮಂಟಪೋತ್ಸವ, ಬೆಳ್ಳಿಪಲ್ಲಕ್ಕಿ ಉತ್ಸವ, ಶಿವಾನುಭವ ಸಮ್ಮೇಳನ, ಪಂಚಬ್ರಹ್ಮೋತ್ಸವದೊಡನೆ ದಿನಾಂಕ ೨೪.೨.೨೦೦೧ರವರೆಗೆ ಜರುಗಿದವು. ವಿದ್ಯುದೀಪಗಳ ಬೆಳಕಿನ ಲೋಕದಲ್ಲಿ ಉತ್ಸವಗಳು ನಯನ ಮನೋಹರವಾಗಿ ನಡೆದು ಜನಸ್ತೋಮದ ಹೃದಯ ಮಂದಿರದಲ್ಲಿ ಧನ್ಯತೆಯ ಭಾವವನ್ನು ಉಂಟುಮಾಡಿದವು. ಅದಕ್ಕಿನ್ನಿಷ್ಟು ಪುಟವಿತ್ತಿದ್ದು ದಿನದಿನದ ಉತ್ಸವಗಳಲ್ಲಿ ಸಿಡಿದ ಬಾಣಬಿರುಸು; ಪಟಾಕಿ ಮುಂತಾದವುಗಳು. ಅವುಗಳ ವಿವಿಧ ನೃತ್ಯ ವೈಭವವೇ ಒಂದು ವಿಶಿಷ್ಟರೀತಿ. ಪಂಚಬ್ರಹ್ಮೋತ್ಸವ ಭೃತ್ಯಾಚಾರಕ್ಕೆತ್ತಿದ ನಿದರ್ಶನ. ತನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಬಸವವಾಣಿಯ ಆಚರಣೆ ಇಲ್ಲಿ, ಬೇರೆ ಬೇರೆ ಮಠಗಳಿಂದ ಆಗಮಿಸಿದ ಪೂಜ್ಯ ಮಠಾಧೀಶರನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಪೂಜ್ಯ ಶ್ರೀಗಳು ಉತ್ಸವದ ಮುಂದೆ ನಡೆದು ಶರಣ ಸಂಸ್ಕೃತಿಯನ್ನು ಬಿಂಬಿಸುವ ಅರ್ಥಪೂರ್ಣ ಉತ್ಸವ.

ಎತ್ತುಗಳ ಪ್ರದರ್ಶನ, ಬಹುಮಾನ, ಅವುಗಳಿಗೆ ವಿಮೆ, ರೈತವರ್ಗದ ಬಂಧುಗಳ ಹಣ ರಕ್ಷಣೆಗಾಗಿ ಬ್ಯಾಕಿಂಗ್ ವ್ಯವಸ್ಥೆ, ನೈರ್ಮಲ್ಯ ಸರಿರಕ್ಷಣೆ, ಕಳ್ಳಕಾಕರ ಅನೈತಿಕ ವ್ಯವಹಾರಗಳಾಗದಂತೆ ತಡೆ, ರಕ್ಷಣಾ ಇಲಾಖೆ ಯವರಿಂದ ಶಾಂತಿಪಾಲನೆ, ಸಾರಿಗೆ ಇಲಾಖೆ ಯವರಿಂದ ವಾಹನಸೌಲಭ್ಯ ವ್ಯವಸ್ಥೆ, ದಾಸೋಹಕಾರ್ಯದಲ್ಲಿ ಹಗಲು-ಇರುಳು ಒಲೆ

ಮುಂದೆ ನಿಂತು ದುಡಿವ, ಸಿದ್ಧವಾದ ಪ್ರಸಾದ ವಿತರಣೆಯಲ್ಲಿ ಭಾಗಿಗಳಾಗುವ ಶಿಕ್ಷಕ, ಶಿಕ್ಷಕೇತರ ಸಿಬ್ಬಂದಿಯ, ವಿದ್ಯಾರ್ಥಿಗಳ, ಹಳೆಯ ವಿದ್ಯಾರ್ಥಿಗಳ ಸೇವೆಸಹಕಾರಗಳು ಜಾತ್ರೆಯ ಯಶಸ್ಸಿಗೆ ಕಾರಣಗಳು.

ಈ ವರ್ಷ ಪ್ರಾರ್ಥನಾಸಭೆಯಲ್ಲಿ ಧಾರ್ಮಿಕೋಪನ್ಯಾಸಗಳನ್ನು ಏರ್ಪಡಿಸಲಾಗಿತ್ತು. ಜಾತ್ರಾರ್ಥಿಗಳಿಗೆ ಈ ಯೋಜನೆ ಪ್ರಿಯವಾಯಿತು, ಬೋಧಪ್ರದವೆನಿಸಿತು, ಉಪನ್ಯಾಸಕರಾಗಿ ಸಹಕರಿಸಿದ ಎಲ್ಲ ಮಹನೀಯರು, ಮಹಿಳೆಯರು ವಿವಿಧ ವಿಷಯಗಳ ಮೇಲೆ ಬೆಳಕುಚೆಲ್ಲಿ ಶ್ರೋತೃಗಳ ಮನಗೆದ್ದರು.

ಪರಮಪೂಜ್ಯ ಶ್ರೀ ಶ್ರೀಗಳವರ ಆಶಯಕ್ಕೆ ಸಾಕಾರವಾಗುತ್ತಿರುವ ಪೂಜ್ಯ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳವರು ಜಾತ್ರೆಸೇವೆಯನ್ನು ಇನ್ನೂ ಹೇಗೆ ಲೋಕೋಪಕಾರವನ್ನಾಗಿ ಮಾಡಬಹುದೆಂಬ ಸೇವಾದೀಕ್ಷೆಯನ್ನು ಮೌನವಾಗಿಯೇ ಚಿಂತನೆಗೊಳಪಡಿಸುತ್ತಿರುವ ಹಾಗೆ ಜಾತ್ರೆಯ ಎಲ್ಲ ಕಾರ್ಯಕ್ರಮಗಳಲ್ಲಿ ಅರ್ಪಿತರಾಗಿ ಕಾಣಬಂದುದು ಭಕ್ತಾದಿಗಳಿಗೆ ಸಂತೋಷವನ್ನುಂಟುಮಾಡಿತು.

ಉತ್ತಮ ರಾಸುಗಳೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಹಾಗೂ ಆಯ್ಕೆ ಸಮಿತಿ ಸದಸ್ಯರು.

ವಿಜೇತ ರಾಸುಗಳ ಮಾಲೀಕರೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರು

ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಆರ್. ಹಿತೇಂದ್ರ ಅವರಿಂದ ಬಹುಮಾನ ವಿತರಣೆ →

**ಶ್ರೀವಾಣಿ**

ನೂರು ಉಪನ್ಯಾಸ, ಪ್ರವಚನ, ಭಾಷಣಗಳಿಗಿಂತ ಹಸಿದು ಬಂದ ಜೀವಕ್ಕೆ ತುತ್ತು ಅನ್ನ ನೀಡುವುದು ಬಹಳ ಶ್ರೇಷ್ಠವೆಂದು ನಂಬಿ ನಡೆದವರು ನಮ್ಮ ಪೂಜ್ಯ ಗುರುಗಳು.





ನಿಮಗಿದು ತಿಳಿದಿರಲಿ

# ಮೆಂತ್ಯದ ಸೊಪ್ಪು – ಸಬ್ಬಸಿಗೆ ಸೊಪ್ಪು

ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್, ಆಯುರ್ವೇದರತ್ನ
ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು

## ಮೆಂತ್ಯದ ಸೊಪ್ಪು

ಮೆಂತ್ಯದ ಸೊಪ್ಪು ವಾತಸಂಬಂಧಗಳಾದ ಎಲ್ಲಾ ವಿಕಾರಗಳನ್ನೂ ಶಾಂತಗೊಳಿಸುತ್ತದೆ. ಜಠರಾಗ್ನಿಯನ್ನು ಹೆಚ್ಚಿಸುತ್ತದೆ. ವಾತರೋಗಿಗಳಿಗೆ ಈ ಸೊಪ್ಪು ಬಹಳ ಗುಣಕಾರಿಯಾಗಿರುತ್ತದೆ. ದಕ್ಷಿಣ ಕರ್ನಾಟಕ ದೇಶದಲ್ಲಿ ಈ ಸೊಪ್ಪನ್ನು ಬೇಯಿಸಿ ತಿನ್ನುವುದೇ ಹೆಚ್ಚಾಗಿದೆ. ಉತ್ತರ ಕರ್ನಾಟಕ ದೇಶದಲ್ಲಿ ಈ ಸೊಪ್ಪನ್ನು ಕತ್ತರಿಸಿ ಇದರೊಡೆ ಮೂಲಂಗಿಯನ್ನು ಮತ್ತು ಉಪ್ಪನ್ನು ಸೇರಿಸಿ ರೊಟ್ಟಿಯ ಜೊತೆಗೆ ತಿನ್ನುವ ರೂಢಿಯು ವಿಶೇಷವಾಗಿದೆ. ಉತ್ತರ ಭಾರತದಲ್ಲಿಯೂ ಮೆಂತ್ಯದ ಹಸಿರು ಸೊಪ್ಪಿಗೆ ಉಪ್ಪು, ಮೆಣಸಿನ ಪುಡಿಗಳನ್ನು ಹಾಕಿ ಸ್ವಲ್ಪ ತುಪ್ಪ, ಜೀರಿಗೆಗಳ ಒಗ್ಗರಣೆಯನ್ನು ಕೊಟ್ಟು ತಿನ್ನುವುದು ರೂಢಿಯಾಗಿದೆ. ಇದರಿಂದ ಹೊಟ್ಟೆಯೊಳಗಿನ ವಾಯುವಿಕಾರ ಮತ್ತು ಹೊಟ್ಟೆಯಲ್ಲಿ ಸೇರಿ ಕೊಂಡಿರುವ ಶೈತ್ಯವು ನಾಶವಾಗುತ್ತದೆ. ಸೊಪ್ಪುಗಳನ್ನು ಯಾವಾಗಲೂ ಹಬೆಯಲ್ಲಿ ಬೇಯಿಸಿ ಬಸಿಯದೆ ತಿನ್ನುವುದೇ ಉತ್ತಮ. ಇದರಿಂದ ನಮ್ಮ ಶರೀರಕ್ಕೆ ಸೊಪ್ಪುಗಳಲ್ಲಿರುವ ಕ್ಷಾರಗಳು ಸಂಪೂರ್ಣವಾಗಿ ಸೇರುತ್ತವೆ.

ವಾಯುವಿನ ಸಮಸ್ತ ವಿಕಾರಗಳಿಗೂ ರಾಮಬಾಣದಂತಿರುವ ಮೆಂತ್ಯದ ಸೊಪ್ಪಿನ ಈ ಒಂದು ಪ್ರಯೋಗವನ್ನು ಕಾಶಿಯ ಒಬ್ಬ ಸುಪ್ರಸಿದ್ಧ ವೈದ್ಯರು ನನಗೆ ಹೇಳಿದ್ದರು. ಆದರಂತೆಯೇ ಕಾಶಿಯಲ್ಲಿ ಕೆಲವರಿಂದ ಮಾಡಿಸಲಾಗಿ ವಿಶೇಷ ಪ್ರಯೋಜನವೂ ಲಭಿಸಿತು.

ಐದು ಸೇರು ಕರಿಯ ಗೇರನ್ನು ತಂದು ಕುಟ್ಟಿಸಿ ಅದನ್ನು ಕೆಂಪು ಮಣ್ಣಿನೊಡನೆ ಕೂಡಿಸಿ ಉತ್ತಮವಾದ ಭೂಮಿಯಲ್ಲಿ ಗೊಬ್ಬರದಂತೆ ಹಾಕಬೇಕು. ಆ ಭೂಮಿಯಲ್ಲಿ ಮೆಂತ್ಯವನ್ನು ಬಿತ್ತಿ ನಿತ್ಯದಲ್ಲಿ ನೀರನ್ನು ಹಾಕುತ್ತಿರಬೇಕು. ಸೊಪ್ಪು ಚೆನ್ನಾಗಿ ಬೆಳೆದನಂತರ ಅದನ್ನು ಕಿತ್ತು ಪ್ರತಿ ದಿನವೂ ಹಬೆಯಲ್ಲಿ ಬೇಯಿಸಿ ಉಪ್ಪು ಮತ್ತು ಮೆಣಸಿನ ಪುಡಿಯನ್ನು ಹಾಕಿ ತಿನ್ನಬೇಕು. ಬೇಕಾದರೆ ಹೆಸರುಬೇಳೆಯೊಡನೆ ಹಾಕಿ ಬೇಯಿಸಿ ಸೇವಿಸಬಹುದು. ಮತ್ತು ರುಚಿಗಾಗಿ ಬೇಕಾದರೆ ಕಾರ ಮುಂತಾದವುಗಳ ಸಂಕ್ಷಿಪ್ತ ಸಂಸ್ಕಾರವನ್ನು ಮಾಡಿಯಾದರೂ ಸೇವಿಸಬಹುದು. ಹೀಗೆ ೪೦ ದಿನಗಳವರೆಗೆ ಆಗುವಷ್ಟು ಸೊಪ್ಪನ್ನು ಬೇಯಿಸಿಕೊಂಡು ಸೇವಿಸಿದರೆ ಎಂತಹ ಅತಿ ಕಷ್ಟಸಾಧ್ಯವಾದ ವಾತರೋಗವಾದರೂ ಶಾಂತವಾಗುತ್ತದೆ. ನಿತ್ಯದಲ್ಲಿ ಮೈನೋವು. ಸೊಂಟನೋವು, ಕೀಲುನೋವು, ಬೆನ್ನುನೋವು ಮುಂತಾದ ಅನೇಕ ವಿಧ ನೋವುಗಳಿಂದ ವ್ಯಥೆಪಡುತ್ತಿರುವವರು ಮೆಂತ್ಯದ ಸೊಪ್ಪನ್ನು ಈ ರೀತಿಯಾಗಿ ಬೆಳೆಯಿಸಿಕೊಂಡು ಆಹಾರ ರೂಪವಾಗಿಯೇ ಸೇವಿಸಿ ಆಯಾಸವಿಲ್ಲದೆ ಗುಣವನ್ನೂ ಪಡೆಯಬಹುದು. ಗೇರನ್ನು ಮಣ್ಣಿನೊಡನೆ ಸೇರಿಸಿ ಕಟ್ಟುವುದುತ್ತಮ. ಒಂದನ್ನೇ ಕುಟ್ಟಿದರೆ ಗೇರಿನ ಎಣ್ಣೆಯು ಸಿಡಿದು ಚರ್ಮದ ಮೇಲೆ ಬೊಬ್ಬೆಗಳಾಗುವ ಸಂಭವವೂ ಉಂಟು. ಆದುದರಿಂದ ಗೇರನ್ನು ಕುಟ್ಟುವಾಗ ಬಹಳ ಜಾಗರೂಕತೆಯಿಂದ ಬೇಕಾದುದು ಮುಖ್ಯವಾಗಿದೆ.

ಮೆಂತ್ಯದ ಹಿಟ್ಟಿನ ಪೋಲ್ಟೀಸನ್ನು ಮಾಡಿ ಕುರಗಳ ಮೇಲೆ ಕಟ್ಟಿದರೆ ಊತ ಮತ್ತು ನೋವು ಎರಡೂ ಶಾಂತವಾಗುತ್ತವೆ.

★ ಮೆಂತ್ಯದ ಕಾಳು ೫ ತೊಲ, ನೆಲ್ಲಿಚೆಟ್ಟು ೫ ತೊಲ, ಕೊತ್ತುಂಬರಿ ಬೀಜ ೫ ತೊಲ ಈ ಮೂರನ್ನೂ ರಾತ್ರಿ ನೀರಿನಲ್ಲಿ ನೆನಹಾಕಿದ್ದು ಪ್ರಾತಃಕಾಲದಲ್ಲಿ ನುಣ್ಣಗೆ ಅರೆದು ತಲೆಗೆ ಹಚ್ಚಿಕೊಂಡು ಸ್ವಲ್ಪ ಹೊತ್ತಾದ ನಂತರ ಸ್ನಾನವನ್ನು ಮಾಡಬೇಕು ಮತ್ತು ಇದರ ಸ್ವಲ್ಪ ಭಾಗವನ್ನು ಉಳಿಸಿದ್ದು ಶರೀರಕ್ಕೆ ಹಚ್ಚಿತಿಕ್ಕಿಕೊಳ್ಳಬೇಕು. ಇದರಿಂದ ತಲೆಯಲ್ಲಿನ ಉಷ್ಣತೆಯು ಶಾಂತವಾಗುವುದಲ್ಲದೆ ಚರ್ಮ ದೋಷಗಳೆಲ್ಲಾ ದೂರವಾಗುತ್ತವೆ.

★ ಮೆಂತ್ಯ ೧ ಪಾವು, ಹೆಸರುಕಾಳು ೧ ಪಾವು, ಕೊತ್ತುಬಂರಿ ಬೀಜ ೩. ತೊಲ, ಕಸ್ತೂರಿ ಅರಿಶಿನ ೩ ತೊಲ, ಇವುಗಳನ್ನು ಕುಟ್ಟಿ ಶೋಧಿಸಿ ಇಟ್ಟುಕೊಳ್ಳಬೇಕು. ಇದರಲ್ಲಿನ ಸ್ವಲ್ಪ ಪುಡಿಯನ್ನು ನೀರಿನೊಡನೆ ಕೂಡಿಸಿ ಶರೀರಕ್ಕೆ ಹಚ್ಚಿ ಸ್ನಾನ ಮಾಡುವುದರಿಂದ ಮೈಮೇಲೆದ್ದಿರುವ ಪಿತ್ತದ ಗುಳ್ಳೆಗಳು ನಾಶವಾಗುತ್ತವೆ. ಮತ್ತು ಚರ್ಮವು ಸ್ವಚ್ಛವೂ, ಮೃದುವೂ ಆಗುತ್ತದೆ.

★ ಅಕ್ಕಿ ಅಥವಾ ಗೋಧಿಗೆ ಕಾಲುಭಾಗ ಮೆಂತ್ಯವನ್ನು ಸೇರಿಸಿ ಬೀಸಬೇಕು. ಈ ಹಿಟ್ಟಿನ ರೊಟ್ಟಿ ಅಥವಾ ದೋಸೆಯನ್ನು ಹಬೆಯಲ್ಲಿ ಬೇಯಿಸಿ ಮಾಡಿರುವ ಮೆಂತ್ಯದ ಸೊಪ್ಪಿನ ಪಲ್ಯದೊಡನೆ ತಿನ್ನುವುದರಿಂದ ಹೊಟ್ಟೆಯೊಳಗಿನ ದೋಷಿತ ವಾಯುವು ಜೀರ್ಣವಾಗುತ್ತದೆ.

★ ಮೆಂತ್ಯ ೩೨ ತೊಲ, ಒಣಗಿದ ಶುಂಠಿ ೩೨ ತೊಲ, ಇವೆರಡನ್ನೂ ಕುಟ್ಟಿ ಶೋಧಿಸಿಕೊಂಡು, ಈ ಚೂರ್ಣವನ್ನು ೩ ಸೇರು ಹಸುವಿನ ಹಾಲಿನಲ್ಲಿ ಹಾಕಿ ಖೋವಾ ಮಾಡಿಕೊಳ್ಳಬೇಕು.

ಶುಂಠಿ, ಮೆಣಸು, ಹಿಪ್ಪಲಿ, ಮೋಡಿ, ಚಿತ್ರಮೂಲದ ಬೇರು, ಅಜವಾನ (ಓಮ), ಧನಿಯ, ಬಿಳಿಯ ಜೀರಿಗೆ, ಕಲೌಂಜಿ ಜೀರಿಗೆ, ಸೌಂಪು, ಕಚೋರ, ದಾಲಚೀನಿ, ತೇಜಪತ್ರೆ (ಲವಂಗಪತ್ರೆ), ತುಂಗೆಗಡ್ಡೆ, ಏಲಕ್ಕಿ ಮತ್ತು ಲವಂಗ ಈ ೧೭ ವಸ್ತುಗಳನ್ನು ೪-೪ ತೊಲದಂತೆ ತಂದು ಕುಟ್ಟಿ ಶೋಧಿಸಿಕೊಳ್ಳಬೇಕು. ಅನಂತರ ಈ ಚೂರ್ಣವನ್ನು ೩೫ ತೊಲ ತುಪ್ಪದಲ್ಲಿ ಕೆಂಪಾಗುವಂತೆ ಸುಪಕ್ವವಾಗಿ ಹುರಿದಮೇಲೆ ೮ ಸೇರು ಸಕ್ಕರೆಯ ಪಾಕವನ್ನು ಮಾಡಿಕೊಳ್ಳಬೇಕು. ಪಾಕವು ಬರುತ್ತಿರುವಾಗ ಅದರಲ್ಲಿ ಮೊದಲೇ ಮಾಡಿಟ್ಟುಕೊಂಡಿರುವ ಖೋವಾ ಮತ್ತು ತುಪ್ಪದಲ್ಲಿ ಹುರಿದಿಟ್ಟಿರುವ ಚೂರ್ಣ, ಇವುಗಳನ್ನು ಹಾಕಿ ಚೆನ್ನಾಗಿ ಕೂಡಿಸಬೇಕು. ಎಲ್ಲವೂ ಸೇರಿ ಗಟ್ಟಿಯಾದ ನಂತರ ಕೆಳಗಿಳಿಸಿಕೊಂಡು ೨-೨ ತೊಲೆಯ ಲಡ್ಡುಗಳನ್ನು ಕಟ್ಟಿ ಇಟ್ಟುಕೊಳ್ಳಬೇಕು. ಈ ''ಮೇಥೀ ಮೋದಕ'' ವನ್ನು ಅವರವರ ಬಲವನ್ನನುಸರಿಸಿ ನಿತ್ಯದಲ್ಲಿ ಸೇವಿಸುವುದರಿಂದ ಸಕಲವಿಧ ವಾತರೋಗಗಳು, ಪಾಂಡುರೋಗ, ಮೂರ್ಛೆ, ಬುದ್ಧಿಭ್ರಮೆ, ಮೇಹವ್ಯಾಧಿ, ತಲೆನೋವು, ಮೂಗು ಮತ್ತು ಕಣ್ಣಿನ ಸಂಬಂಧವಾದ ರೋಗಗಳು ಮತ್ತು ಬಾಣಂತಿಯರ ರೋಗಗಳು ಅತಿ ಶೀಘ್ರವಾಗಿ ಗುಣವಾಗುತ್ತವೆ. ಮತ್ತು ಬಲ, ವೀರ್ಯ, ಪುಂಸತ್ವಗಳು ಹೆಚ್ಚುತ್ತವೆ. ಇಂದ್ರಿಯಗಳ ಬಲವನ್ನು ಕಳೆದು ಕೊಂಡಿರತಕ್ಕವರೆಲ್ಲರೂ ಚಳಿಗಾಲದಲ್ಲಿ ೪ ತಿಂಗಳುಗಳವರೆಗೆ ಈ ಮೋದಕವನ್ನು ಅವಶ್ಯಕವಾಗಿ ತಪ್ಪದೆ ಸೇವಿಸಿದರೆ ಕಳೆದು ಹೋಗಿರುವ ಬಲವು ಪುನಃ ಲಭಿಸಿ ಜೀವನದಲ್ಲಿ ಒಂದು ವಿಲಕ್ಷಣವಾದ ಸ್ಫೂರ್ತಿಯುಂಟಾಗುತ್ತದೆ.

**ಸಬ್ಬಸಿಗೆ ಸೊಪ್ಪು**

ಸಬ್ಬಸಿಗೆಸೊಪ್ಪು ಉಷ್ಣ, ಸಿಹಿ, ಅಗ್ನಿಯನ್ನು ವೃದ್ಧಿಗೊಳಿಸುವುದು, ಶೂಲ ಮತ್ತು ವಾತವನ್ನು ನಾಶಮಾಡುವುದು, ರುಚಿಕರ, ಪಿತ್ತವನ್ನು ಇದರಲ್ಲಿ ಉಷ್ಣಗುಣವು ಹೆಚ್ಚಾಗಿರುವುದರಿಂದ ವಾತ ಮತ್ತು ಕಫ ಸಂಬಂಧವಾದ ರೋಗಿಗಳಿಗೆ ವಿಶೇಷ ಗುಣಕಾರಿಯಾಗುತ್ತದೆ.

★ ಸಬ್ಬಸಿಗೆ ಸೊಪ್ಪನ್ನು ಹಬೆಯಲ್ಲಿ ಬೇಯಿಸಿ ಉಪ್ಪು ಮತ್ತು ಮೆಣಸಿನಪುಡಿಯನ್ನು ಹಾಕಿ ತಿನ್ನುವುದಾದರೆ ಆಗ ತಾನೇ ಹಡೆದಿರುವ ಬಾಣಂತಿಯ ಹೃದಯದ ದುರ್ಬಲತೆಯು ದೂರವಾಗುತ್ತದೆ.

★ ಸಬ್ಬಸಿಗೆ ಬೀಜಗಳ ಕಷಾಯವನ್ನು ಕುಡಿಯುವುದರಿಂದ ಬಾಣಂತಿಯ ಹೊಟ್ಟೆಶೂಲೆ ಮತ್ತು ಹೃದಯದ ದೌರ್ಬಲ್ಯವು ನಾಶವಾಗುತ್ತದೆ. ಒಂದು ಸಲಕ್ಕೆ ೨ ತೊಲ ಬೀಜದಂತೆ, ೩೨ ತೊಲ ನೀರಿನಲ್ಲಿ ಹಾಕಿ ೪ ತೊಲ ಕಷಾಯವನ್ನು ಇಳಿಸಿಕೊಳ್ಳಬೇಕು.

★ ಸಬ್ಬಸಿಗೆ ಬೀಜ, ದೇವದಾರು, ಬಜೆ, ಸೌಂಪು, ಹಿಂಗು, ಹಸನಾದ ಕೋಷ್ಠ ಮತ್ತು ಸೈಂಧವಲವಣ ಇವುಗಳನ್ನು ಸಮವಾಗಿ ತಂದು ಕುಟ್ಟಿ ಮಜ್ಜಿಗೆ ಅಥವಾ ನಿಂಬೆಹಣ್ಣಿನ ರಸದಲ್ಲಿ ಅರೆದು ಬಿಸಿಮಾಡಿ ಹೊಟ್ಟೆಗೆ ಲೇಪಿಸುವುದರಿಂದ ಹೊಟ್ಟೆಯ ನೋವು, ಹೊಟ್ಟೆಯಲ್ಲಿ ಗುರುಗುಟ್ಟುವುದು, ಇವೇ ಮುಂತಾದ ವಾಯುವಿನ ಉಪದ್ರವಗಳು ನಾಶವಾಗುತ್ತವೆ. ಶರೀರದ ಯಾವ ಭಾಗದಲ್ಲಿಯೇ ಆಗಲಿ ಬಾವು ಅಥವಾ ನೋವಿದ್ದರೆ ಈ ಲೇಪವನ್ನು ಲೇಪಿಸುವುದು ಲಾಭದಾಯವಾಗಿರುತ್ತದೆ.

★ ಸಬ್ಬಸಿಗೆ ಬೀಜವನ್ನು ಹಿಪ್ಪೆಯ ಎಣ್ಣೆಯೊಡನೆ ಅರೆದು ಕೀಲುಗಳಿಗೆ ತಿಕ್ಕಿದರೆ ಕೀಲುನೋವು ಕಡಿಮೆಯಾಗುತ್ತದೆ.

★ ಸಬ್ಬಸಿಗೆ ಸೊಪ್ಪಿನ ರಸ ೧ ಸೇರು, ನುಗ್ಗೆ ಸೊಪ್ಪಿನ ರಸ ೧ ಸೇರು, ಆಡಿನ ಮೂತ್ರ ೨ ಸೇರು, ಅಳತೆ ಸೇರು ೧ ಸೇರು ಎಳ್ಳೆಣ್ಣೆ ಇವುಗಳನ್ನು ಕಲಾಯಿಮಾಡಿರುವ ಒಂದು ಪಾತ್ರೆಯಲ್ಲಿ ಹಾಕಿ ಒಲೆಯ ಮೇಲಿಟ್ಟು ಕಾಯಿಸಬೇಕು. ಕಾಯುತ್ತಿರುವಾಗ - ಬಜೆ, ವಾಯಿವಿಳಂಗ, ಓಮ, ರಾಶ್ಮೆ, ಬೆಳ್ಳುಳ್ಳಿ, ಹಿಂಗು, ಪ್ರತಿಯೊಂದು ಎರಡೆರಡೂ ತೊಲದಂತೆ ನೀರನೊಡನೆ ನುಣ್ಣಗೆ ಅರೆದು ಹಾಕಬೇಕು. ರಸ ಮತ್ತು ಆಡಿನ ಮೂತ್ರವು ಇಂಗಿ ಎಣ್ಣೆಯು ಮಾತ್ರ ಉಳಿದನಂತರ ೧ ತೊಲ ಕರ್ಪೂರವನ್ನು ಪುಡಿಮಾಡಿ ಹಾಕಿ ಇಳಿಸಿಕೊಂಡು ಆರಿದ ನಂತರ ೧ ತೊಲ ಕರ್ಪೂರವನ್ನು ಪುಡಿಮಾಡಿ ಹಾಕಿ ಇಳಿಸಿಕೊಂಡು ಆರಿದ ನಂತರ ಶೋಧಿಸಿಕೊಳ್ಳಬೇಕು. ಈ ಎಣ್ಣೆಯನ್ನು ಹಚ್ಚಿ ತಿಕ್ಕುವುದರಿಂದ ಲಕ್ವಾ ಮತ್ತು ಕೀಲುವಾಯು ಮುಂತಾದ ವಾಯುವಿಕಾರಗಳು ಮತ್ತು ಸಕಲವಿಧ ನೋವು, ಬಾವುಗಳು ಶೀಘ್ರವಾಗಿ ಶಾಂತವಾಗುತ್ತವೆ.

★ ಮೂರು ತೊಲ ಸಬ್ಬಸಿಗೆ ಬೀಜಗಳನ್ನು ತಂದು ನೀರಿನೊಡನೆ ಅರೆದು ಬಿಲ್ಲೆಯನ್ನು ಮಾಡಿ ಅದನ್ನು ಆಸನಕ್ಕೆ ಇಟ್ಟು, ಮೇಲೆ ಎಕ್ಕದ ಎಲೆಯನ್ನು ಕಟ್ಟಬೇಕು. ಈ ರೀತಿಯಾಗಿ ೩ ದಿನಗಳವರೆಗೆ ಬಿಡದಂತೆ ಕಟ್ಟುವುದರಿಂದ, ಮೂಲ ರೋಗದ ಮೊಳಕೆಗಳು ಕತ್ತರಿಸಿಬೀಳುತ್ತವೆ ಕಟ್ಟುವುದಕ್ಕೆ ಎಕ್ಕ, ಅರಳು, ಹೊಗೆಸೊಪ್ಪು, ಈ ಮೂರು ಗಿಡಗಳ ಎಲೆಗಳಲ್ಲಿ ಯಾವುದನ್ನಾದರೂ ಉಪಯೋಗಿಸಬಹುದು. ಆದರೆ ಕೋಮಲ ಪ್ರಕೃತಿಯವರು ಅರಳೆಲೆಯನ್ನು ಕಟ್ಟುವುದೇ ಉತ್ತಮವಾಗಿ ತೋರುತ್ತದೆ. ಉಳಿದೆರಡು ಒಂದಕ್ಕಿಂತ ಒಂದು ಹೆಚ್ಚು ತೀಕ್ಷ್ಣಗುಣ ಉಳ್ಳವುಗಳಾಗಿರುತ್ತವೆ.

★ ಸಬ್ಬಸಿಗೆ ಸೊಪ್ಪು ಅಥವಾ ಬೀಜ ಮತ್ತು ಸೈಂಧವಲವಣ ಇವುಗಳನ್ನು ಅರೆದು ತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದ ಜೇನು ನೊಣಗಳ ವಿಷವು ಶಾಂತವಾಗುತ್ತವೆ.

★ ಸಬ್ಬಸಿಗೆ ಬೀಜ, ಲವಂಗ, ಅಜವಾನ, ಬೀಡುಲವಣ, ಈ ನಾಲ್ಕನ್ನು ಸಮವಾಗಿ ತಂದು ಕುಟ್ಟಿ ನಿಂಬೆಹಣ್ಣಿನ ರಸದಲ್ಲಿ ೩ ಗಂಟೆಗಳ ಕಾಲ ಅರೆದು ಸಣ್ಣ ಎಲಚಿ (ಬೋರೆ) ಕಾಯಿಯಷ್ಟು ಗುಳಿಗೆಗಳನ್ನು ಮಾಡಿ ನೆರಳಿನಲ್ಲಿ ಒಣಗಿಸಿ ಇಟ್ಟುಕೊಳ್ಳಬೇಕು. ನಿತ್ಯದಲ್ಲಿ ಅಜೀರ್ಣ, ಮಂದಾಗ್ನಿಗಳಿಂದ ನರಳುತ್ತಿರುವವರು ಒಂದೊಂದು ಗುಳಿಗೆಯನ್ನು ನುಂಗಿ ಮೇಲೆ ಸ್ವಲ್ಪ ನೀರನ್ನು ಕುಡಿಯಬೇಕು. ನಿರೋಗಿಗಳು ಊಟವಾದ ಮೇಲೆ ಒಂದೊಂದು ಗುಳಿಗೆಯನ್ನು ನುಂಗುತ್ತಿದ್ದರೆ ಹಸಿವು ಹೆಚ್ಚಾಗುತ್ತದೆ. ಮತ್ತು ಆಹಾರವು ಬೇಗನೆ ಪಚನವಾಗುವುದಲ್ಲದೆ ಜೀರ್ಣಶಕ್ತಿಯು ಯಾವಾಗಲೂ ಕೆಡುವುದಿಲ್ಲ.

(ಮುಂದುವರೆಯುತ್ತದೆ)





# ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ರಾಜ್ಯಮಟ್ಟದ ಪಾರಂಪರಿಕ ವೈದ್ಯರ ಸಮ್ಮೇಳನ




ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಅನುಗ್ರಹ ಭಾಷಣ

ರಾಜ್ಯಮಟ್ಟದ ಪಾರಂಪರಿಕ ವೈದ್ಯ ಸಮ್ಮೇಳನ ಜನವರಿ ೫ರಿಂದ ೭ರವರೆಗೆ ಶ್ರೀ ಸಿದ್ಧಗಂಗಾ ಮಠದ ಶ್ರೀ ಉದ್ದಾನೇಶ್ವರ ಕಲ್ಯಾಣಮಂಟಪದಲ್ಲಿ ನಡೆಯಿತು. ಪಾರಂಪರಿಕ (ನಾಟಿ) ವೈದ್ಯಕೀಯ ಮಹತ್ವದ ಬಗ್ಗೆ ಜನಸಾಮಾನ್ಯರಲ್ಲಿ ಅರಿವು ಮೂಡಿಸುವುದು, ವೈದ್ಯರು ಪರಸ್ಪರ ಚರ್ಚಿಸಿ ಚಿಕಿತ್ಸೆಗಳ ಬಗ್ಗೆ ಹೆಚ್ಚಿನ ಮಾಹಿತಿ ಪಡೆದುಕೊಳ್ಳಲು ಅವಕಾಶ ಕಲ್ಪಿಸಿಕೊಡುವುದು ನಾಟಿ ವೈದ್ಯ ಚಿಕಿತ್ಸೆಯ ಬಗ್ಗೆ ಸಂಶೋಧನೆ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಲ್ಪಟ್ಟ ಉದ್ದೇಶಿತ ಸಮ್ಮೇಳನದ ಮೂಲ ಆಶಯವಾಗಿತ್ತು.

ಸಮ್ಮೇಳನವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದ ಶ್ರೀ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ''ಪಾರಂಪರಿಕ ವೈದ್ಯ ಪದ್ಧತಿಯ ಬಗ್ಗೆ ಜನರಲ್ಲಿರುವ ತಮ್ಮ ಭಾವನೆಗಳನ್ನು ಹೋಗಲಾಡಿಸಲು ಇಂಥ ಸಮ್ಮೇಳನಗಳ ಅವಶ್ಯ ತುಂಬಾ ಇದೆ. ಈ ಸಮ್ಮೇಳನ ಹೊಸ ವಿಚಾರಗಳಿಗೆ ನಾಂದಿಯಾಗಲಿ'' ಎಂದು ತಿಳಿಸಿದರು.




ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಶ್ರೀ ನಾರಾಯಣಮೂರ್ತಿಯವರಿಗೆ ಸನ್ಮಾನ



ಪ್ರತಿನಿಧಿಗಳು

ಅರಣ್ಯ ಸಚಿವ ಶ್ರೀ ಕೆ.ಎಚ್. ರಂಗನಾಥ್‌ಅವರು ಈ ಸಂದರ್ಭದಲ್ಲಿ ಮಾತನಾಡಿ ''ಅರಣ್ಯಗಳಲ್ಲಿ ದೊರೆಯುವ ಗಿಡ ಮೂಲಿಕೆಗಳನ್ನು ಬಳಸಿಕೊಂಡು ಔಷಧಿಗಳನ್ನು ತಯಾರಿಸಿ ಅವುಗಳು ಜನಸಾಮಾನ್ಯರಿಗೆ ದೊರಕುವಂತಾಗಲು ಮುಖ್ಯಮಂತ್ರಿಗಳೊಂದಿಗೆ ಚರ್ಚಿಸಲಾಗಿದ್ದು ಶೀಘ್ರದಲ್ಲಿ ಒಂದು ಸಮಿತಿಯನ್ನು ರಚಿಸುವುದಾಗಿ'' ತಿಳಿಸಿದರು.

''ಇಂದು ಅಲೋಪತಿ ವೈದ್ಯಕೀಯ ಪದ್ಧತಿಯಲ್ಲಿ ಜನ ಸಾಮಾನ್ಯರಿಗೆ ದುಬಾರಿಯಾಗುತ್ತಿರುವ ಸಂದರ್ಭದಲ್ಲಿ ಪಾರಂಪಾರಿಕ ವೈದ್ಯಪದ್ಧತಿ ಪರಿಣಾಕಾರಿಯಾಗಿ ಬೆಳವಣಿಗೆ ಹೊಂದಿ ಅತಿ ಕಡಿಮೆ ವೆಚ್ಚದಲ್ಲಿ ಜನಸಾಮಾನ್ಯರ ರೋಗಗಳ ನಿವಾರಣೆಗೆ ಸಹಾಯವಾಗುತ್ತದೆ'' ಎಂದು ತಿಳಿಸಿದ ಸಚಿವರು ಗಿಡಮೂಲಿಕೆಗಳನ್ನು ಹಾಗೂ ಅವುಗಳಿಂದ ದೊರೆಯುವ ಲಾಭವನ್ನು ಜನಸಾಮಾನ್ಯರಿಗೆ ತಿಳಿಸಲು ಪುಸ್ತಕಗಳನ್ನು ರಚಿಸಲು ಕರೆನೀಡಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮಕ್ಕಳ ಕಲ್ಯಾಣ ಇಲಾಖೆಯ ಕಾರ್ಯದರ್ಶಿ ಶ್ರೀಮತಿ ಮೀರಾ ಸಕ್ಸೇನಾ ಅವರು ಮಾತನಾಡಿ ''ಮಹಿಳೆಯರಲ್ಲಿ ಜಾಗೃತಿಮೂಡಿಸಲು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಸ್ತ್ರೀಶಕ್ತಿಯಂತಹ ಯೋಜನೆ ಜಾರಿಗೆ ತಂದಿದೆ. ಸ್ವಸಹಾಯ ಸಂಘ, ಉಳಿತಾಯ ಮೂಲಕ ಆರ್ಥಿಕ ಸ್ವಾವಲಂಬನೆ ಮೂಡಿಸುವ ಜೊತೆಗೆ ಪೌಷ್ಠಿಕ ಆಹಾರ ಮತ್ತು ಆರೋಗ್ಯದ ಬಗೆಗೂ ತಿಳಿಸಿಕೊಡಬಲ್ಲರು. ಪ್ರತಿ ಮನೆಯಲ್ಲಿಯೂ ಮಹಿಳೆಯರೂ, ಹಿರಿಯರಿಂದ ಬೆಳೆದು ಬಂದಿರುವ ಪಾರಂಪರಿಕ ವೈದ್ಯ ಪದ್ಧತಿ ಅಲೋಪತಿ ಪ್ರಭಾವದಿಂದ ಕ್ಷೀಣವಾಗುತ್ತಿದೆ'' ಎಂದು ತಿಳಿಸಿದ ಸಕ್ಸೇನ ಅವರು ''ಸಣ್ಣಪುಟ್ಟ ರೋಗಗಳಿಗೂ ಆಸ್ಪತ್ರೆಗೆ ಹೋಗುವುದನ್ನು ಬಿಟ್ಟು ಮನೆಯಲ್ಲಿಯೇ ಚಿಕಿತ್ಸೆ ಪಡೆಯಬಹುದೆಂಬ ಅರಿವು ಮೂಡಿಸುವ ಅಗತ್ಯವಿದೆ'' ಎಂದು ತಿಳಿಸಿದರು.

### ಸನ್ಮಾನ

ಇದೇ ಸಂದರ್ಭದಲ್ಲಿ ಈ ವರ್ಷದ ಪಾರಂಪರಿಕ ಮಟ್ಟವನ್ನು ೨೦೦೦ ಪ್ರಶಸ್ತಿಗೆ ಆಯ್ಕೆಯಾದ ಮೂತ್ರಪಿಂಡದ ಕಲ್ಲು ನಿವಾರಣೆಯಲ್ಲಿ ಸಿದ್ಧ ಹಸ್ತರಾದ ಶಿವಮೊಗ್ಗ ಜಿಲ್ಲಾ ಸಾಗರ ತಾಲ್ಲೂಕಿನ ನರಸೀಪುರದ ಶ್ರೀ ನಾರಾಯಣ ಮೂರ್ತಿ ಅವರಿಗೆ ಪಂಚಲೋಹದ ಮೂರ್ತಿ, ೧೦ ಸಾವಿರ ರೂ. ನಗದು ಹಾಗೂ ಪ್ರಶಸ್ತಿ ಪತ್ರವನ್ನು ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ನೀಡಿ ಸನ್ಮಾನಿಸಿದರು.

ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ದಾಕ್ಷಾಯಿಣಿ ಅಶ್ವತ್ಥ್ ಅವರು ಅಧ್ಯಕ್ಷತೆವಹಿಸಿದ್ದರು. ಈ ಸಂದರ್ಭದಲ್ಲಿ ಖ್ಯಾತ ವೈದ್ಯ ಡಾ. ಲೀಲಾವತಿ ದೇವರಾಜ್, ಡಾ. ಉಪೇಂದ್ರ ಶೆಣೈ, ಶ್ರೀ ಮೋಹನ ಕಾರ್ನಾಡ್, ಡಾ. ಸತ್ಯನಾರಾಯಣಭಟ್, ಡಾ. ಬಿ. ರಾಜು ಮೊದಲಾದವರು ಮಾತನಾಡಿದರು. ಉಪ ಅರಣ್ಯ ಸಂರಕ್ಷಣಾಧಿಕಾರಿ ಶ್ರೀ ಗಾ.ನಂ. ಶ್ರೀಕಂಠಯ್ಯ ಅವರು ಸ್ವಾಗತಿಸಿದರು. ಶ್ರೀ ಎಂ.ಜಿ. ಸಿದ್ಧರಾಮಯ್ಯ ಕಾರ್ಯಕ್ರಮ ನಿರೂಪಿಸಿದರು. ❊





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೩೮೫. | **ಶ್ರೀಮತಿ ಲಕ್ಷ್ಮೀದೇವಮ್ಮ, ಮಾಣಿಕಾಚಾರ್**<br>ನಂ. ೧೫/೧,<br>ಜೀವನಹಳ್ಳಿ ಮೈನ್ ರೋಡ್<br>ಆಚಾರಪ್ಪ ಗಾರ್ಡನ್, ಕಾಕ್ಸ್‌ಟೌನ್<br>ಬೆಂಗಳೂರು – ೫೬೦ ೦೦೫. | ೨.೫೦೦.೦೦<br>(೨ನೇ ಕಂತು) |
| ೩೮೬. | **ಎನ್. ಸಿದ್ಧಲಿಂಗಸ್ವಾಮಿ**<br>ನಂ. ೧೨೮೫/ಎ, ೧ನೇ ಕ್ರಾಸ್<br>ನೆಲಮಹೇಶ್ವರಿ ದೇವಸ್ಥಾನದ ರಸ್ತೆ<br>ಕಲ್ಯಾಣನಗರ, ಟಿ. ದಾಸರಹಳ್ಳಿ<br>ಬೆಂಗಳೂರು – ೫೬೦ ೦೫೭. | ೧,೦೦೧.೦೦<br>(೧ನೇ ಕಂತು) |
| ೩೮೭. | **ಶ್ರೀ ಹೆಚ್.ಎಸ್. ಶಿವರುದ್ರಯ್ಯ**<br>ನಿವೃತ್ತ ಶಿಕ್ಷಕರು, ಪುರುಷನಹಳ್ಳಿ<br>ದೊಡ್ಡಬಳ್ಳಾಪುರ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೧,೦೦೧.೦೦<br>(೨ನೇ ಕಂತು) |
| ೩೮೮. | **ಶ್ರೀ ಸಿದ್ಧಗಂಗಾ ಅರ್ಬನ್ ಕೋ ಆಪರೇಟಿವ್ ಬ್ಯಾಂಕ್**<br>ಬಿ.ಹೆಚ್. ರಸ್ತೆ<br>ತುಮಕೂರು | ೫,೦೦,೦೦೦.೦೦ |
| ೩೮೯. | **ಶ್ರೀ ಎಚ್.ಎನ್. ಶಿವಣ್ಣ**<br>ನಂ. ೧೮೨, ೭ನೇ ಬಿ. ಮುಖ್ಯರಸ್ತೆ<br>ಆರ್.ಪಿ.ಸಿ. ಬಡಾವಣೆ, ೨ನೇ ಹಂತ<br>ವಿಜಯನಗರ, ಬೆಂಗಳೂರು – ೪೦ | ೧,೦೦೦.೦೦<br>(೨ನೇ ಕಂತು) |
| ೩೯೦. | **ಶ್ರೀಮತಿ ಎಂ. ಶಿವಮ್ಮ**<br>ನಂ. ೧೮೨, ೭ನೇ ಬಿ. ಮುಖ್ಯರಸ್ತೆ<br>ಆರ್.ಪಿ.ಸಿ. ಬಡಾವಣೆ, ೨ನೇ ಹಂತ<br>ವಿಜಯನಗರ, ಬೆಂಗಳೂರು – ೪೦ | ೧,೦೦೧.೦೦<br>(೨ನೇ ಕಂತು) |
| ೩೯೧. | **ಶ್ರೀ ಆರ್.ಹೆಚ್. ನೀಲಕಂಠಯ್ಯ**<br>ಸಹಶಿಕ್ಷಕರು, ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೦.೦೦ |
| ೩೯೨. | **ಶ್ರೀಮತಿ ಸುಶೀಲ ಕೆ.ಪಿ. ನಾರಾಯಣ್**<br>೧೨/೧೮, ಉದಾನಿ ಬಡಾವಣೆ, ಅಲಸೂರು<br>ಬೆಂಗಳೂರು – ೫೬೦ ೦೦೮. | ೨,೫೦೦.೦೦<br>(೨ನೇ ಕಂತು) |
| ೩೯೩. | **ಶ್ರೀ ಎನ್. ವೀರಭದ್ರಯ್ಯ**<br>ಶಿಕ್ಷಕರು, ಹೊಸಹಳ್ಳಿ<br>ಶ್ರೀ ಗಿರಿಪುರ ಅಂಚೆ, ಮಾಗಡಿ ತಾಲ್ಲೂಕು<br>ಬೆಂಗಳೂರು ಗ್ರಾಮಾಂತರ ಜಿಲ್ಲೆ | ೧,೦೦೦.೦೦ |
| ೩೯೪. | **ಶ್ರೀ ಆರ್.ಎಂ.ಕೆ. ಮೋಹನರಾವ್ ಮತ್ತು ಶ್ರೀಮತಿ ವಿಜಯದುರ್ಗಾ**<br>ನಿರ್ವಹಣಾ ವಿಭಾಗ, ಹೆಚ್.ಎಂ.ಟಿ. ಕಾರ್ಖಾನೆ – ೪<br>ತುಮಕೂರು – ೫೭೨ ೧೦೩. | ೨,೦೦೧.೦೦ |
| ೩೯೫. | **ಶ್ರೀಮತಿ ಬಿ. ಚಂದ್ರಮತಿ, ಐಗೂರು**<br>ಕೇರಾಫ್. ಶ್ರೀ ಎ.ಎಸ್. ನಟರಾಜ್<br>ಮಲ್ಲಿಕಾರ್ಜುನ ನಗರ, ಸಕಲೇಶಪುರ<br>ಹಾಸನ ಜಿಲ್ಲೆ. | ೨,೦೦೦.೦೦ |
| ೩೯೬. | **ಶ್ರೀ ಕಾಳೀರಪ್ಪ**<br>ನಂ. ೩೦೪೦, ೧೪ನೇ 'ಎ' ಮುಖ್ಯರಸ್ತೆ<br>೮ನೇ 'ಎ' ಕ್ರಾಸ್, ಬೆಂಗಳೂರು – ೪೦ | ೧,೦೦೧.೦೦<br>(೨ನೇ ಕಂತು) |
| ೩೯೭. | **ಶ್ರೀಮತಿ ಮಲಗೊಂಡನಹಳ್ಳಿ ಪಾರ್ವತಮ್ಮ ಎಂ.ಬಿ. ಶಿವಣ್ಣ, ಮಲ್ಲಿಕಾರ್ಜುನಸ್ವಾಮಿ**<br>ಸಂಗಮೇಶ್ವರ ಟ್ರೇಡರ್ಸ್, ನಂ. ೭೫೦<br>ಗೋವಿಂದನಪುರ ಬಡಾವಣೆ, ಪಂಪ್‌ಹೌಸ್ ರಸ್ತೆ<br>ತಿಪಟೂರು, ತುಮಕೂರು ಜಿಲ್ಲೆ. | ೧,೦೦೦.೦೦<br>(೨ನೇ ಕಂತು) |
| ೩೯೮. | **ಶ್ರೀಮತಿ ಟಿ.ಬಿ. ಸರಸ್ವತಮ್ಮ ಮತ್ತು ಟಿ.ಎನ್. ರಾಮಕೃಷ್ಣ, ದಿವ್ಯಶ್ರೀ,**<br>ಕುವೆಂಪು ರಸ್ತೆ, ರಾಘವೇಂದ್ರನಗರ<br>ತುಮಕೂರು – ೫೭೨ ೧೨೨. | ೧,೦೦೦.೦೦<br>(೨ನೇ ಕಂತು) |
| ೩೯೯. | **ಶ್ರೀ ಟಿ.ಎಂ. ಸಿದ್ಧರಾಮಯ್ಯ**<br>ಎಸ್.ಎಸ್. ಅಲ್ಯೂಮಿನಿಯಂ ಫೆಬ್ರಿಕೆಟ್ಸ್<br>೧೬ನೇ ಕ್ರಾಸ್, ಎಸ್.ಎಸ್. ಪುರಂ<br>ತುಮಕೂರು – ೫೭೨ ೧೦೨. | ೫,೧೦೧.೦೦ |

(ಮುಂದುವರಿಯುತ್ತದೆ)

# ಅಖಿಲ ಭಾರತ ವೀರಶೈವ ಮಹಾಸಭಾದ
# ರಾಜಾಜಿನಗರ ಘಟಕದ ಉದ್ಘಾಟನೆ



ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವ ದಿವ್ಯಸಾನ್ನಿಧ್ಯದಲ್ಲಿ ಕೋಡಿಮಠದ ಪರಮಪೂಜ್ಯ ಶ್ರೀ ಶ್ರೀ ಶಿವಾನಂದ ಶಿವಯೋಗಿ ರಾಜೇಂದ್ರ ಸ್ವಾಮಿಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಅ.ಭಾ.ವಿ.ಸ.ದ ರಾಜಾಜಿನಗರ ಘಟಕವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಬೆಲಿಮಠದ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು, ನೇತ್ರದಾನಿ ಡಾ॥ ಎಂ.ಸಿ. ಮೋದಿ, ಶ್ರೀ ಚಂದ್ರಕಾಂತ ಬೆಲ್ಲದ ರಾಜಾಜಿನಗರ ಘಟಕದ ನೂತನ ಅಧ್ಯಕ್ಷ ಶ್ರೀ ಎಂ.ಎಸ್. ನಟರಾಜ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.

"ವೀರಶೈವ ಧರ್ಮ ವಿಶ್ವಧರ್ಮ. ಎಲ್ಲಾ ಧರ್ಮಗಳನ್ನು ಸಮಾನ ಗೌರವದಿಂದ ಕಾಣುವ ಧರ್ಮ" ಎಂದು ಶ್ರೀಮನ್ನಿಂರಜನ ಪ್ರಣವ ಸ್ವರೂಪಿ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅನುಗ್ರಹ ನುಡಿಯಲ್ಲಿ ತಿಳಿಸಿದರು. ಶ್ರೀ ಶ್ರೀಗಳವರು ಮಾರ್ಚ್ ಲರಂದು ಬೆಂಗಳೂರು ನಗರದ ಶರಣಸೇವಾ ಸಮಾಜದಲ್ಲಿ ಏರ್ಪಡಿಸಿದ್ದ ಅಖಿಲ ಭಾರತ ವೀರಶೈವ ಮಹಾಸಭಾದ ರಾಜಾಜಿನಗರ ಘಟಕದ ಉದ್ಘಾಟನಾ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ಪರಮಪೂಜ್ಯ ಶ್ರೀ ಶ್ರೀಗಳವರು "ಅಖಿಲ ಭಾರತ ವೀರಶೈವ ಮಹಾಸಭಾದ ರಾಜಾಜಿನಗರ ಘಟಕ ಪ್ರಾರಂಭವಾಗುತ್ತಿರುವುದಕ್ಕೆ ಸಂತೋಷವನ್ನು ವ್ಯಕ್ತಪಡಿಸಿ ಲಿಂಗೈಕ್ಯ ಕುಮಾರ ಹಾನಗಲ್ ಅವರ ಶ್ರಮ ಹಾಗೂ ದೂರದೃಷ್ಟಿಯ ಫಲವಾಗಿ ಸಂಸ್ಥೆಯನ್ನು ಆರಂಭಿಸಲಾಯಿತು.





ಸಮಾಜದಲ್ಲಿ ಸಂಘಟನೆ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ವೀರಶೈವ ಮಹಾಸಭಾ ಮಹತ್ತರವಾದ ಉದ್ದೇಶವನ್ನು ಅರ್ಥಮಾಡಿಕೊಂಡು ಕೆಲಸಮಾಡಬೇಕಾಗಿದೆ. ರಾಜಕೀಯವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಹಾಗೂ ಔದ್ಯೋಮಿಕವಾಗಿ ಮುಂದೆ ಬರಬೇಕಾಗಿದೆ." ಎಂದು ತಿಳಿಸಿದ ಶ್ರೀ ಶ್ರೀಗಳವರು ದಿನೇ ದಿನೇ ಕ್ಷಿಪ್ರಗತಿಯಲ್ಲಿ ಬೆಳೆಯುತ್ತಿರುವ ಜನಸಂಖ್ಯಾ ಸ್ಫೋಟದ ಬಗ್ಗೆ ಕಳವಳವನ್ನು ವ್ಯಕ್ತಪಡಿಸಿದರು. "ವೀರಶೈವರಲ್ಲಿ ಇಂದು ಲಕ್ಷಾಂತರ ಜನ ಬಡತನದಲ್ಲಿ ತೊಳಲಾಡುತ್ತಿದ್ದಾರೆ. ನಿಕೃಷ್ಟವಾದ ಜೀವನ ಸಾಗಿಸುತ್ತಿದ್ದಾರೆ. ಅವರ ಬದುಕು ಉತ್ತಮವಾಗಬೇಕು. ಅವರ ಭವಿಷ್ಯವನ್ನು ರೂಪಿಸುವ ಗುರುತರವಾದ ಜವಬ್ದಾರಿ ಸಮಾಜದ ಮೇಲಿದೆ" ಎಂದು ತಿಳಿಸಿದ. "ಸಮಾಜ ಬಾಂಧವರು ಸಂಘಟಿತರಾಗಿ ಕಾರ್ಖಾನೆಗಳನ್ನು ಸಂಸ್ಥೆಗಳನ್ನು ಸ್ಥಾಪನೆ ಮಾಡಿ ವೀರಶೈವ ಯುವಜನಾಂಗಕ್ಕೆ ಉದ್ಯೋಗ ನೀಡಿ ಅವರ ಜೀವನ ಬೆಳಗುವಂತೆ ಮಾಡಬೇಕು. ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಸೂಕ್ತ ವಾತಾವರಣ ಕಲ್ಪಿಸಿ ಅವರು ಉನ್ನತ ದರ್ಜೆಯಲ್ಲಿ ಉತ್ತೀರ್ಣರಾಗುವಂತೆ ಮಾಡಿ ಜೀವನ ರೂಪಿಸಿಕೊಳ್ಳುವಂತೆ ಮಾಡುವ ಅಗತ್ಯವನ್ನು" ಒತ್ತಿ ಹೇಳಿದರು.

ಜ್ಯೋತಿ ಬೆಳಗಿಸುವುದರ ಮೂಲಕ ಘಟಕವನ್ನು ಉದ್ಘಾಟಿಸಿದ ಕೋಡಿಮಠದ ಪರಮಪೂಜ್ಯ ಶ್ರೀ ಶ್ರೀ ಶಿವಾನಂದಾ ಶಿವಯೋಗಿ ರಾಜೇಂದ್ರ ಸ್ವಾಮಿಗಳು ತಮ್ಮ ಅನುಗ್ರಹ ನುಡಿಯಲ್ಲಿ "ಧರ್ಮ ಜೀವನದಲ್ಲಿ ಹಾಸು ಹೊಕ್ಕಾಗಬೇಕು. ಮಾನವೀಯ ಮೌಲ್ಯಗಳನ್ನು ಚಿಂತನೆಗೆ ಒಳಪಡಿಸಿ ಅದರಂತೆ ನಡೆಯುವುದು ಧರ್ಮವಾಗುತ್ತದೆ. ವೀರಶೈವ ಧರ್ಮ ಸನಾತನ ಕಾಲದಿಂದ ಜನರ ಒಳಿತಿಗಾಗಿ ನಡೆದುಕೊಂಡು ಬಂದಿದೆ. ಸರ್ವರನ್ನು ಸಮಾನವಾಗಿ ಕಾಣುವುದು ವೀರಶೈವ ಧರ್ಮ" ಎಂದು ತಿಳಿಸಿದರು. ಅವರು ಲಿಂಗಪೂಜೆಯ ವೈಜ್ಞಾನಿಕ ದೃಷ್ಟಿ, ವಿಭೂತಿ, ರುದ್ರಾಕ್ಷಿ ಹಾಗೂ ಬಿಲ್ವಪತ್ರೆಯ ಮಹತ್ವವನ್ನು ತಿಳಿಸಿ "ಪರರ ಹಿತವನ್ನೇ ಬಯಸುವ ವೀರಶೈವ ಧರ್ಮ ಇಂದು ಅವನತಿಯತ್ತ ಸಾಗುತ್ತಿದೆ" ಎಂದು ವಿಷಾದಿಸಿದರು.

ಇದೇ ಸಂದರ್ಭದಲ್ಲಿ ಸಮಾರಂಭದ ಯಶಸ್ಸಿಗೆ ನೆರವು ನೀಡಿದ ದಾನಿಗಳನ್ನು ಪರಮಪೂಜ್ಯ ಶ್ರೀ ಶ್ರೀ ಸಿದ್ಧಗಂಗಾ ಶ್ರೀಗಳವರು ಫಲ ತಾಂಬೂಲ ನೀಡಿ ಆಶೀರ್ವದಿಸಿದರು.

ಬೇಲಿಮಠಾಧ್ಯಕ್ಷರಾದ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ "ಬಸವಣ್ಣನವರ ಆದರ್ಶವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು; ಅಖಿಲ ಭಾರತ ವೀರಶೈವ ಮಹಾಸಭಾದ ರಾಜಾಜಿನಗರ ಘಟಕ ಯಶಸ್ಸಿನ ಹಾದಿಯಲ್ಲಿ ಮುನ್ನಡೆಯಲಿ" ಎಂದು ಹಾರೈಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಮಾಜಿ ಸಹಕಾರ ಸಚಿವರಾದ ಶ್ರೀ ಎಸ್.ಎಸ್. ಪಾಟೀಲ ಅವರು ಮಾತನಾಡಿ "ಮೊದಲು ಮಠಾಧಿಪತಿಗಳಲ್ಲಿರುವ ಭೇದಭಾವಗಳನ್ನು ತೊಡೆದು ಹಾಕಬೇಕು. ಎಲ್ಲರು ಒಂದೇ ಎಂಬ ಭಾವನೆ ಮೂಡಬೇಕು. ಆಗಾದಾಗ ಸಮಾಜದ ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ, ಒಡೆದು ಹಂಚಿ ಹೋಗಿರುವ ವೀರಶೈವರಲ್ಲಿರುವ ಒಳಪಂಗಡಗಳು ಒಂದಾಗಬೇಕು. ಈ ಕಾರ್ಯವನ್ನು ಅಖಿಲ ಭಾರತ ವೀರಶೈವ ಮಹಾಸಭಾ ಮಾಡಲು ಮುಂದಾಗಬೇಕು" ಎಂದು ತಿಳಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಅಖಿಲ ಭಾರತ ವೀರಶೈವ ಮಹಾಸಭಾದ ಹಿರಿಯ ಉಪಾಧ್ಯಕ್ಷರಾದ ಶ್ರೀ ವಿಶ್ವನಾಥರೆಡ್ಡಿ ಮುದ್ನಾಳ ಅವರು ವಹಿಸಿದ್ದರು. ಸಮಾರಂಭದಲ್ಲಿ ಡಾ॥ ಎಂ.ಸಿ. ಮೋದಿ, ಶ್ರೀ ಚಂದ್ರಕಾಂತ ಬೆಲ್ಲದ, ಶ್ರೀ ಬಿ.ಎಸ್. ಪರಮಶಿವಯ್ಯ, ಶ್ರೀ ಹೆಚ್.ವಿ. ನಾಗೇಂದ್ರಪ್ಪ, ಶ್ರೀ ಮಹಾರುದ್ರಪ್ಪ ಹಾಗೂ ಶ್ರೀಮತಿ ವಿನೋದ ನಟರಾಜ್ ಅವರು ಉಪಸ್ಥಿತರಿದ್ದರು.

ಸಮಾರಂಭಕ್ಕೆ ಮುನ್ನ ಶ್ರೀ ಶ್ರೀಗಳವರನ್ನು ಸಮಾರಂಭದ ವೇದಿಕೆಗೆ ಪೂರ್ಣಕುಂಭಗಳೊಂದಿಗೆ ನಂದಿ ಧ್ವಜ, ವೀರಗಾಸೆ ನೃತ್ಯದೊಂದಿಗೆ ಭಕ್ತಿಪೂರ್ವಕವಾಗಿ ಬರಮಾಡಿಕೊಳ್ಳಲಾಯಿತು.

ಕಾರ್ಯಕ್ರಮ ಶ್ರೀಮತಿ ನಾಗಲಾಂಬಿಕೆ ಅವರ ಪ್ರಾರ್ಥನೆಯೊಂದಿಗೆ ಆರಂಭವಾಯಿತು. ರಾಜಾಜಿನಗರ ಘಟಕದ ನೂತನ ಅಧ್ಯಕ್ಷರು; ಸಮಾಜದ ಜನಪ್ರಿಯ ಯುವಮುಖಂಡರು ಆದ ಶ್ರೀ ಎಂ.ಎಸ್. ನಟರಾಜ್ ಅವರು ಎಲ್ಲರನ್ನು ಸ್ವಾಗತಿಸಿ ರಾಜಾಜಿನಗರ ಘಟಕ ಉತ್ತಮ ಮಟ್ಟದಲ್ಲಿ ಕಾರ್ಯನಿರ್ವಹಿಸಲು ಎಲ್ಲರ ಸಹಕಾರ ಹಾಗೂ ಮಾರ್ಗದರ್ಶನವನ್ನು ಕೋರಿದರು. ಕೊನೆಯಲ್ಲಿ ಶ್ರೀ ವಿ. ನಾಗರಾಜು ಅವರು ವಂದಿಸಿದರು.

## ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರ ಅನಾವರಣ ಮತ್ತು ಸನ್ಮಾನ ಸಮಾರಂಭ



ಪರಮಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕನಕಪುರ ದೇಗುಲ ಮಠದ ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮದ ಉದ್ಘಾಟನೆ. ವೇದಿಕೆಯಲ್ಲಿ ಚಕ್ರಬಾವಿ ಮಠದ ಶ್ರೀ ಶ್ರೀಗಳು, ಬೆಂಗಳೂರು ಮಹಾನಗರ ಪಾಲಿಕೆ ಮಹಾ ಪೌರರಾದ ಶ್ರೀಮತಿ ಪ್ರೇಮಾ ಕರಿಯಪ್ಪ, ಶಾಸಕ ಶ್ರೀ ವಿ. ಸೋಮಣ್ಣ, ಉಪ ಮಹಾಪೌರರಾದ ಶ್ರೀ ಬಿ.ಎಸ್. ಪುಟ್ಟರಾಜು, ಸಾಹಿತಿ ಶ್ರೀ ಜಿ.ಎಸ್. ಸಿದ್ಧಲಿಂಗಯ್ಯ, ಮಹಾನಗರ ಪಾಲಿಕೆ ಸದಸ್ಯೆ ಶ್ರೀಮತಿ ವೈ.ಜಿ. ವೈದೇಹಿ ಹಾಗೂ ಪ್ರೌಢಶಾಲೆ ಮುಖ್ಯೋಪಾಧ್ಯಾಯರಾದ ಶ್ರೀ ಜೆ. ಸದಾಶಿವಯ್ಯ ಅವರು ಉಪಸ್ಥಿತರಿದ್ದರು.

"ಮಕ್ಕಳ ಭವಿಷ್ಯವನ್ನು ರೂಪಿಸುವಲ್ಲಿ ಶಿಕ್ಷಕರ ಜವಾಬ್ದಾರಿ ಗುರುತರವಾದುದು. ಶಿಕ್ಷಕರು ಮಕ್ಕಳ ಭವಿಷ್ಯದ ಹಿತದೃಷ್ಟಿಯಿಂದ ಪ್ರಾಮಾಣಿಕವಾಗಿ ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ಅರ್ಪಣಾ ಮನೋಭಾವವನ್ನು ಬೆಳೆಸಿಕೊಂಡು ಮಕ್ಕಳಿಗೆ ಉತ್ತಮ ಮಾರ್ಗದರ್ಶನ ನೀಡಬೇಕು" ಎಂದು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅನುಗ್ರಹ ಭಾಷಣದಲ್ಲಿ ತಿಳಿಸಿದರು.

ಶ್ರೀ ಶ್ರೀಗಳವರು ಮಾರ್ಚ್, ೮ರಂದು ಬೆಂಗಳೂರಿನಲ್ಲಿ ಶಿವನಗರ ಜಂಗಮಮಠದಲ್ಲಿರುವ ಶ್ರೀ ಸಿದ್ಧಗಂಗಾ ಪೂರ್ವ ಪ್ರಾಥಮಿಕ, ಹಿರಿಯ ಪ್ರಾಥಮಿಕ, ಪ್ರೌಢಶಾಲೆ ಹಾಗೂ ಶ್ರೀ ಅಂಬುಜ ಸಂಸ್ಕೃತ ಪಾಠಶಾಲೆ ಇವುಗಳ ಸಂಯುಕ್ತ ಆಶ್ರಯದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಡಾ ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರ ಅನಾವರಣ ಹಾಗೂ ಸನ್ಮಾನ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು.

ಕನಕಪುರ ದೇಗುಲ ಮಠದ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಸ್ವಾಮಿಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಅವರು ಇದೇ ಸಂದರ್ಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಭಾವಚಿತ್ರ ಅನಾವರಣಗೊಳಿಸಿದರು. ಅವರು ತಮ್ಮ ಅನುಗ್ರಹ ನುಡಿಗಳಲ್ಲಿ "ಪರಮಪೂಜ್ಯ ಶ್ರೀ ಶ್ರೀಗಳವರು ಸಮಾಜದ ಒಳಿತಿಗಾಗಿ ತಮ್ಮನ್ನು ಅರ್ಪಿಸಿಕೊಂಡಿರುವ ಮಹಾಚೇತನ. ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗಳನ್ನು ಸ್ಥಾಪಿಸಿ ಲಕ್ಷಾಂತರ ಜನ ಹಿಂದುಳಿದವರು, ದೀನದಲಿತರು, ಬಡವರ ಅರಿವಿನ ಜ್ಯೋತಿಯನ್ನು ಬೆಳಗಿಸಿ ಅವರ ಭವಿಷ್ಯವನ್ನು ಉಜ್ವಲವಾಗುವಂತೆ ಮಾಡುತ್ತಿರುವ ಆಶಾಜ್ಯೋತಿಯಾಗಿದ್ದಾರೆ. ಲಕ್ಷಾಂತರ ಕುಟುಂಬಗಳಲ್ಲಿ ಶ್ರೀ ಸಿದ್ಧಗಂಗಾ ಜ್ಯೋತಿ ಬೆಳಗುವಂತೆ ಮಾಡಿರುವ, ಮಾಡುತ್ತಿರುವ ಪರಮಪೂಜ್ಯರ ಸೇವೆ ಅನನ್ಯವಾದುದು. ಬಸವಣ್ಣನವರ ಆದರ್ಶಗಳನ್ನು ಕಾಯಕ-ದಾಸೋಹ ಸಿದ್ಧಾಂತವನ್ನು ಅನುಷ್ಠಾನಗೊಳಿಸಿರುವ ಶ್ರೀಗಳವರು ಶ್ರೀಮಠವನ್ನು ಕಾಯಕ-ದಾಸೋಹಗಳ ಕಾರ್ಯಕಮ್ಮಟವನ್ನಾಗಿಸಿದ್ದಾರೆ. ಮಾನವೀಯ ಮೌಲ್ಯಗಳ ಸಾಕಾರರೂಪವಾಗಿರುವ ಪೂಜ್ಯ ಶ್ರೀ ಶ್ರೀಗಳವರು ಸಮಾಜ ಸೇವೆಗಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ." ಎಂದು ತಿಳಿಸಿದರು.

ಪ್ರಸಿದ್ಧ ಸಾಹಿತಿಗಳೂ ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರೂ ಆದ ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ವಿದ್ಯಾರ್ಥಿಗಳಲ್ಲಿರುವ ಸೂಕ್ತ ಪ್ರತಿಭೆಯನ್ನು ಹೊರಹೊಮ್ಮಿಸುವ ಶ್ರೀಮತಿ ಜೆ. ರಾಜೇಶ್ವರಿ ಅವರ ಸಂಪಾದಕತ್ವದಲ್ಲಿ ಹೊರತಂದ ಶಾಲಾವಾರ್ಷಿಕ ಸಂಚಿಕೆ "ಸೃಜನ"ವನ್ನು ಬಿಡುಗಡೆ ಮಾಡಿ " ಸೃಜನ ಸಂಚಿಕೆ ಶೀಲತೆ ವ್ಯಕ್ತಿಯ ವಿಕಾಸಕ್ಕೆ ಒಂದು ಉತ್ತಮ ಉದಾಹರಣೆ ಮಕ್ಕಳ ಭವಿಷ್ಯದ ಹಿತದೃಷ್ಟಿಯಿಂದ ವಾರ್ಷಿಕ ಸಂಚಿಕೆ ಸೃಜನ ಸದುದ್ದೇಶ ಮೆಚ್ಚುವಂತಹದು" ಎಂದು ಪ್ರಶಂಶಿಸಿದರು.

ಇದೇ ಸಂದರ್ಭದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಮಹಾಪೌರರಾದ ಶ್ರೀಮತಿ ಪ್ರೇಮಾ ಕಾರ್ಯಪ್ಪ, ಉಪ ಮಹಾಪೌರರಾದ ಶ್ರೀ ಬಿ.ಎಸ್.



ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರಿಂದ ಶ್ರೀ ಶ್ರೀಗಳವರ ಭಾವಚಿತ್ರ ಅನಾವರಣ



ಪ್ರೊ. ಜಿ.ಎಸ್. ಸಿದ್ದಲಿಂಗಯ್ಯ ಅವರಿಂದ ಶಾಲಾವಾರ್ಷಿಕ ಸಂಚಿಕೆ ಬಿಡುಗಡೆ.



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಶಾಲಾ ಸಿಬ್ಬಂದಿ ವರ್ಗ

ಸಮಾರಂಭ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಬೆಂಗಳೂರು ಮಹಾನಗರ ಪಾಲಿಕೆ ಮಹಾಪೌರರಾದ ಪ್ರೇಮಕಾರ್ಯಪ್ಪ ಅವರಿಗೆ ಸನ್ಮಾನ

ಪುಟ್ಟರಾಜು, ಮಹಾನಗರ ಪಾಲಿಕೆಯ ಸದಸ್ಯರಾದ ಶ್ರೀಮತಿ ವೈದೇಹಿ ಅವರನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಾಲು ಹೊದಿಸಿ ಫಲ ತಾಂಬೂಲ ಹಾಗೂ ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ಅಲ್ಲದೆ ಶಾಲಾ ವಾರ್ಷಿಕ ಸಮಾರಂಭ ಯಶಸ್ವಿಯಾಗಿ ನಡೆಯಲು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನೆರವು ನೀಡಿದ ದಾನಿಗಳನ್ನು ಹಾಗೂ ವಿಶೇಷ ಆಹ್ವಾನಿತರಾಗಿ ಆಗಮಿಸಿದ್ದ ಶಿಕ್ಷಣ ಸಂಸ್ಥೆಯ ಆಡಳಿತ ಮಂಡಳಿಯವರನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವದಿಸಿದರು.

ಮಾಜಿ ಸಚಿವರು, ಶಾಸಕರೂ, ಶ್ರೀಕ್ಷೇತ್ರದ ಬಗ್ಗೆ ಅಪಾರ ಅಭಿಮಾನ ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಅನನ್ಯ ಭಕ್ತಿಯನ್ನು ಇಟ್ಟುಕೊಂಡಿರುವ ಶ್ರೀ ವಿ. ಸೋಮಣ್ಣನವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ''ಪರಮಪೂಜ್ಯ ಶ್ರೀ ಶ್ರೀಗಳವ ಅನುಗ್ರಹ ಇಲ್ಲದೇ ಹೋಗಿದ್ದರೆ ಇವತ್ತು ಲಕ್ಷಾಂತರ ಜನ ಗ್ರಾಮೀಣ ಪ್ರದೇಶದ ಬಡ ವಿದ್ಯಾರ್ಥಿಗಳ ಭವಿಷ್ಯ ಕತ್ತಲಲ್ಲಿ ಕಮರಿಹೋಗುತ್ತಿತ್ತು ಎಂದು ಲಕ್ಷಾಂತರ ಬಡಕುಟುಂಬಗಳ ಮನೆ ಮನಗಳಲ್ಲಿ ಪರಮಪೂಜ್ಯರು ಹಚ್ಚಿದ ಜ್ಞಾನಜ್ಯೋತಿ ಬೆಳಗುತ್ತಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ದರ್ಶನಭಾಗ್ಯ ಕೃಪಾಶೀರ್ವಾದ ನಮಗೆ ದೊರಕಿರುವುದು ನಮ್ಮ ಪೂರ್ವಜನ್ಮದ ಸುಕೃತ ಫಲ'' ಎಂದು ನುಡಿದರು. ಶಾಲಾ ಮಕ್ಕಳಿಂದ ವೈವಿಧ್ಯಮಯ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ''ಹಚ್ಚೆವು ಕನ್ನಡದ ದೀಪ'' ಸಾಮೂಹಿಕ ನೃತ್ಯ, ''ಕೋಳೂರು ಕೊಡಗೂಸು'' ರೂಪಕ ಮೊದಲಾದ ಕಾರ್ಯಕ್ರಮಗಳು ಸಭಿಕರನ್ನು ರಂಜಿಸಿದವು.

ಕಾರ್ಯಕ್ರಮ ಶ್ರೀ ಕೆ.ಹೆಚ್. ಜಗದೀಶ್ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಪ್ರೌಢಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಜಿ. ಸದಾಶಿವಯ್ಯ ಅವರು ಸ್ವಾಗತಿಸಿದರು. ಶ್ರೀಮತಿ ಕೆ.ಎನ್. ಪ್ರಮೀಳಾ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಬಿ.ಆರ್. ಸದಾಶಿವಯ್ಯ ಅವರು ವಂದಿಸಿದರು.

– ವರದಿ : ಶ್ರೀಮತಿ ಕೆ.ಎನ್. ಪ್ರಮೀಳಾ





## STATEMENT OF OWNERSHIP PARTICULARS ABOUT "MAHAMANE"

### Form IV (See Rule 5)


| | | |
|---|---|---|
| Place of Publication | : | Siddaganga (Regd.)<br>Siddaganga Mutt,<br>Tumkur District – 572 104 |
| Periodicity of its Publication | : | Monthly |
| Printer's Name | : | **Sri Nagasundar** |
| Whether Citizen of India | : | Indian |
| Address | : | M/s. Geethanjali Graphics<br>No. 5, M.S.R. Indl., Estate,<br>Gokul Extension,<br>Bangalore – 560 054. |
| Publisher's Name | : | **Sri H.B. Gangadharaiah** |
| Whether Citizen of India | : | Indian |
| Address | : | Publisher<br>Old Students Association,<br>siddaganga Mutt,<br>Tumkur District – 572 104 |
| Editor's Name | : | **H.V. Veerabhadraiah** |
| Nationality | : | Indian |
| Address | : | Editor, "Siddaganga"<br>Siddaganga Mutt,<br>Tumkur District – 572 104 |

I, H.B. Gangadharaiah hereby declare that the particulars given above are true to the best of my knowledge and belief.

Bangalore
Date : 20-3-2001

**(H.B. Gangadhraiah)**
(Signature of Publisher)

## ''ಇಂದಿನ ಭಾರತ ನಾಳಿನ ಜಗತ್ತಿನ ಮಾರ್ಗದರ್ಶಿ'' – ಪಂಡಿತ್ ಜವಾಹರ್‌ಲಾಲ್ ನೆಹರು – ೧೯೫೦

### ನವಭಾರತದ ಪರಿಹಾರ ಭವಿಷ್ಯವಾಣಿಯನ್ನು ಸಾಕಾರಗೊಳಿಸುತ್ತ

### ಕರ್ನಾಟಕ ತೀವ್ರಗತಿಯಲ್ಲಿ ಮುನ್ನಡೆಯುತ್ತಿದೆ.

ಕರ್ನಾಟಕವು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನವೂ ಸೇರಿದಂತೆ ಆಧುನಿಕ ತಂತ್ರಜ್ಞಾನಗಳ ಆವಿಷ್ಕಾರಗಳನ್ನು ಪೂರ್ಣ ಪ್ರಮಾಣದಲ್ಲಿ ಬಳಸಿಕೊಂಡು ದೇಶದಲ್ಲೇ ಮುಂಚೂಣಿಯಲ್ಲಿರುವ ರಾಜ್ಯ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ವಿಜ್ಞಾನಗಳ ನಡುವೆ ಸಮನ್ವಯ ಸಾಧಿಸಿ ಕೃಷಿ, ಕೈಗಾರಿಕೆ, ಆರೋಗ್ಯ, ಶಿಕ್ಷಣ, ವಿದ್ಯುಚ್ಛಕ್ತಿ, ಗ್ರಾಮೀಣಾಭಿವೃದ್ಧಿಗಳಂತಹ ಆದ್ಯ ವಲಯಗಳ ಅಭಿವೃದ್ಧಿಗಾಗಿ ಬಳಸಿಕೊಳ್ಳುತ್ತಿದೆ. ಅಂತೆಯೇ ಸಂವಿಧಾನ ನಿರ್ಮಾತೃಗಳು ದೇಶದ ಸಾರ್ವಭೌಮತ್ವ ಮತ್ತು ಸಮಗ್ರತೆಗಾಗಿ ಹೊಂದಿದ ಸದಾಶಯಗಳನ್ನು ಸಂರಕ್ಷಿಸುತ್ತಾ ಶಾಂತಿ ಹಾಗೂ ಸಮೃದ್ಧಿಗಳನ್ನು ತರುವ ದಿಸೆಯಲ್ಲಿ ರಾಜ್ಯವು ಮಾರ್ಗದರ್ಶಿಯಾಗಿದೆ.

**ಸಾಧನೆಗಳ ಪಕ್ಷಿನೋಟ :**

ಮೂಲಭೂತ ಸೌಲಭ್ಯಗಳ ಅಭಿವೃದ್ಧಿ : **ರಸ್ತೆಗಳು :** ★ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ಸ್ಥಾಪನೆ, ★ ೧೩,೦೦೦ ಕಿ.ಮೀ. ಉದ್ದದ ಗ್ರಾಮೀಣ ರಸ್ತೆಗಳು ಹಾಗೂ ೧೭ ಕಿ.ಮೀ. ಉದ್ದ ಸೇತುವೆಗಳನ್ನು ಉತ್ತಮಗೊಳಿಸಲು ರೂ. ೩೮೮ ಕೋಟಿಗೂ ಹೆಚ್ಚು ಮೊತ್ತದ ವೆಚ್ಚ. ★ ಫೆಬ್ರವರಿ ೨೦೦೨ ವೇಳೆಗೆ ೧೫೩ ರಸ್ತೆ ನಿರ್ಮಾಣ ಯೋಜನೆಗಳು ರೂ. ೯೫ ಕೋಟಿ ವೆಚ್ಚದಲ್ಲಿ ಪೂರ್ಣ. ★ ಬೆಂಗಳೂರು-ಮೈಸೂರು ರಾಜ್ಯ ಹೆದ್ದಾರಿಯನ್ನೂ ಒಳಗೊಂಡು ಹಲವು ಪ್ರಮುಖ ರಸ್ತೆಗಳ ಅಭಿವೃದ್ಧಿ ಕಾರ್ಯ. ರೂ. ೫೬೮ ಕೋಟಿ ವೆಚ್ಚದಲ್ಲಿ ೭೫.೬ ಕಿಲೋಮೀಟರ್‌ಗಳ ಉದ್ದದ ರಸ್ತೆ ಕಾಮಗಾರಿ. ' ೨೦೦೦ ಕಿ.ಮೀ. ಉದ್ದದ ರಸ್ತೆ ಉತ್ತಮಗೊಳಿಸಲು ರೂ. ೧,೯೦೧ ಕೋಟಿ ವೆಚ್ಚದ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ. ★ ರೂ. ೧೫೧ ಕೋಟಿ ವೆಚ್ಚದಲ್ಲಿ ೮,೫೦೦ ಕಿ.ಮೀ. ಉದ್ದದ ಗ್ರಾಮೀಣ ರಸ್ತೆಗಳ ಅಭಿವೃದ್ಧಿ ಕಾರ್ಯ. **ಕುಡಿಯುವ ನೀರು :** ★ ಗ್ರಾಮೀಣ ಹಾಗೂ ಪಟ್ಟಣ ಕುಡಿಯುವ ನೀರು ಸರಬರಾಜಿಗಾಗಿ ಟೆಕ್ನಾಲಜಿ ಮಿಷನ್ ಸ್ಥಾಪನೆ. ★ ೩,೦೦೦ ಗ್ರಾಮಗಳಿಗೆ ಶುದ್ಧ ಕುಡಿಯುವ ನೀರು ಸರಬರಾಜು. ★ ೨೦೦೦-೨೦೦೧ನೇ ಸಾಲಿನಲ್ಲಿ ಗ್ರಾಮೀಣ ಕುಡಿಯುವ ನೀರು ಯೋಜನೆಗಳಿಗಾಗಿ ರೂ. ೩೪೫.೫೫ ಕೋಟಿ ಮೀಸಲು, ★ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆ ರೂ. ೪೪೭ ಕೋಟಿ ವೆಚ್ಚದಲ್ಲಿ ೧,೧೦೫ ಗ್ರಾಮಗಳಲ್ಲಿ ಅನುಷ್ಠಾನ, ★ ಮುಂದಿನ ನಾಲ್ಕು ವರ್ಷಗಳಲ್ಲಿ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯೀಕರಣಕ್ಕಾಗಿ ರೂ. ೪,೪೪೪ ಕೋಟಿ ಮೀಸಲು. **ವಿದ್ಯುಚ್ಛಕ್ತಿ :** ★ ಕೃಷ್ಣಾ ಮೇಲ್ದಂಡೆ ಯೋಜನೆ (೧,೧೦೭ ಮೆ.ವಾ), ವಿಜಯನಗರ ಶಾಖೋತ್ಪನ್ನ ಸ್ಥಾವರ (೫೦೦ ಮೈ.ವಾ), ಗೇರುಸೊಪ್ಪ (೨೪೦ ಮೈ.ವಾ.), ರಾಯಚೂರು ಶಾಖೋತ್ಪನ್ನ ೭ನೇ ಘಟಕ (೨೧೦ ಮೈ.ವಾ.) ಹಾಗೂ ಬಿಡದಿ (೨೦೦ ಮೈವಾ) ಮುಂತಾದ ಮುಖ್ಯ ವಿದ್ಯುದುತ್ಪಾದನಾ ಯೋಜನೆಗಳಿಂದಾಗಿ ಪ್ರಸಕ್ತ ವಿದ್ಯುದುತ್ಪಾದನೆಗೆ ೨,೨೫೭ ಮೆ.ವಾ. ಸೇರ್ಪಡೆ. **ಗ್ರಾಮೀಣಾಭಿವೃದ್ಧಿ :** ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಗ್ರಾಮ ಸಭೆಗಳ ಮೂಲಕ ಶ್ರೀಸಾಮಾನ್ಯನಿಗೆ ಪ್ರಮುಖ ಪಾತ್ರ. ★೧೦೦೦ ಗ್ರಾಮಗಳಲ್ಲಿ ಹುಡ್ಕೋ ನೆರವಿನೊಂದಿಗೆ ರೂ. ೨೦೦ ಕೋಟಿ ವೆಚ್ಚದ ಪಂಚಸೂತ್ರಗಳುಳ್ಳ ಸ್ವಚ್ಛ ಗ್ರಾಮ ಯೋಜನೆ. ★ಗ್ರಾಮೀಣ ಯುವಜನರು ಲಘು ಉದ್ಯಮಗಳನ್ನು ಪ್ರಾರಂಭಿಸಲು ಪರಿಕರ ಸೌಲಭ್ಯಗಳಿಗಾಗಿ ರೂ. ೧೯ಕೋಟಿ ಮೀಸಲು. ★ ಗ್ರಾಮೀಣ ಯುವಜನರಿಗೆ ಮಾಹಿತಿ ತಂತ್ರಜ್ಞಾನ ಸಂಬಂಧಿತ ಕ್ಷೇತ್ರಗಳಲ್ಲಿ ತರಬೇತಿ ನೀಡಲು ಯುವಕಾಮ್ ಸ್ಥಾಪನೆ ★ ಬೇರುಮಟ್ಟದಲ್ಲಿ ಅಧಿಕಾರ ವಿಕೇಂದ್ರಿಕರಣ. **ಆರೋಗ್ಯ :** ರಾಯಚೂರಿನಲ್ಲಿ ಓಪೆಇಸಿ ನೆರವಿನ ೩೫೦ ಹಾಸಿಗೆಗಳ ರಾಜೀವ್‌ಗಾಂಧಿ ಸ್ಮಾರಕ ಸ್ಪೆಷಾಲಿಟಿ ಆಸ್ಪತ್ರೆಯ ಉದ್ಘಾಟನೆ. **ಶಿಕ್ಷಣ :** ೧೧೦೦೦ ಅಪೂರ್ವ ಶಾಲಾ ಕೊಠಡಿಗಳು ಪೂರ್ಣ. ಪಿಯುಸಿ ಹಂತದವರೆಗೆ ಬಾಲಕಿಯರಿಗೆ ವ್ಯಾಸಂಗ ಶುಲ್ಕ ವಿನಾಯಿತಿ. ★ ಶಾಲೆ ತೊರೆದ ೩.೯೦ ಲಕ್ಷ ಮಕ್ಕಳನ್ನು ಪುನಃ ಶಾಲೆಗೆ ಸೇರಿಸಲು ವಿಶೇಷ ಆಂದೋಳನ. ★ಶಾಲೆಗಳಿಗೆ ಸೇರಿದ ಎಲ್ಲಾ ಮಕ್ಕಳನ್ನೂ ಮುಂದಿನ ೩ ವರ್ಷಗಳ ಅವಧಿಯಲ್ಲಿ ಶಾಲೆಗೆ ಸೇರಿಸಲು ಅಕ್ಷರ ಯೋಜನೆ. ★ ೧೦೦೦ ಸರ್ಕಾರಿ ಶಾಲೆಗಳಲ್ಲಿ ಮಾಹಿತಿ ತಂತ್ರಜ್ಞಾನ ಸಂಬಂಧಿತ ವ್ಯಾಸಂಗದ ಅನುಷ್ಠಾನ. **ಕೃಷಿ :** ಕೃಷಿ ವಿಮಾ ಯೋಜನೆಯಡಿ ರೂ. ೧೦೦ ಕೋಟಿ ನೆರವು. **ವಸತಿ :** ಗ್ರಾಮೀಣ ವಸತಿಗೆ ಹೆಚ್ಚು ಒತ್ತು. ಆರ್ಥಿಕವಾಗಿ ಹಿಂದುಳಿದವರಿಗಾಗಿ ವರ್ಷಕ್ಕೆ ೨ ಲಕ್ಷ ಮನೆಗಳನ್ನು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮದ ಸ್ಥಾಪನೆ. **ಇತರ ಪ್ರಮುಖ ಯೋಜನೆಗಳು :** ★ ಬೆಂಗಳೂರಿನ ಬಳಿ ದೇವನಹಳ್ಳಿಯಲ್ಲಿ ರೂ. ೧೦೦೦ ಕೋಟಿ ವೆಚ್ಚದ ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣದ ಚಾಲನೆ.

**೫೨ನೇ ಗಣರಾಜ್ಯೋತ್ಸವದ ಶುಭಾಶಯಗಳು**

**ಬೆಂಗಳೂರು – ಆಧುನಿಕ ಭಾರತದ ಅದ್ಭುತ ನಗರ**

''ಈ ಮುಂಚೆ ವಿದೇಶಿ ಗಣ್ಯರು ಭಾರತಕ್ಕೆ ಭೇಟಿ ನೀಡಿದಾಗಲೆಲ್ಲ ವಿಶ್ವವಿಖ್ಯಾತ ತಾಜ್‌ಮಹಲ್‌ಗೆ ಭೇಟಿ ನೀಡಿದಾಗಲೇ ಅವರಿಗೆ ತೃಪ್ತಿಯುಂಟಾಗುತ್ತಿತ್ತು. ಆದರೀಗ ಅವರಿಗೆ ಈ ದೇಶದ ಭೇಟಿಯ ಸಂದರ್ಭದಲ್ಲಿ ಆಧುನಿಕ ಭಾರತದ ಸೋಜಿಗ-ಬೆಂಗಳೂರಿನ ಮಾಹಿತಿ ತಂತ್ರಜ್ಞಾನ ಕೇಂದ್ರಗಳಿಗೆ ಭೇಟಿ ನೀಡಿದಾಗಲೇ ಸಮಾಧಾನವಾಗುವುದು.

– ಎ.ಬಿ. ವಾಜಪೇಯಿ, ಪ್ರಧಾನ ಮಂತ್ರಿಗಳು

ಶಾಂತಿ ಹಾಗೂ ಸಮೃದ್ಧಿಯನ್ನು ಬೆಳೆಸಲು ನಾವೆಲ್ಲರೂ ವಚನಬದ್ಧರಾಗೋಣ

★ ಕರ್ನಾಟಕ ವಾರ್ತೆ



# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಆಡಳಿತ ಕಛೇರಿ :
ನಂ. 1732/32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ,
ವಿಜಯನಗರ, ಬೆಂಗಳೂರು-560 040.
☎ : 3358017, 3307070

ಮುಖ್ಯ ಶಾಖೆ :
ನಂ.1, ಅಕ್ಕಿಪೇಟೆ, ಬೆಂಗಳೂರು - 53.
☎ : 2282224, 2871003,

**ಗಣಕೀಕೃತ ಶಾಖೆಗಳು :**

ನಂ. 265/ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ✆ : 6541983
ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ✆ : 3402145
ನಂ. 1732/32, ಎಂ.ಸಿ. ಬಡಾವಣೆ, ಎಂ.ಸಿ. ರಸ್ತೆ, ವಿಜಯನಗರ, ಬೆಂಗಳೂರು-560 040. ✆ : 3358017, 3307070
ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ✆ : 3485393.

❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.
❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.
❖ ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

*(31-03-2000ಕ್ಕೆ) (ಲಕ್ಷ ರೂ.ಗಳಲ್ಲಿ)*

| | | | |
|---|---|---|---|
| ಷೇರು ಬಂಡವಾಳ | 154.70 | ಹೂಡಿಕೆಗಳು | 1836.23 |
| ಸಾಲಗಳು ಮತ್ತು ಮುಂಗಡ | 2786.23 | ದುಡಿಯುವ ಬಂಡವಾಳ | 4442.56 |
| ಠೇವಣಿಗಳು | 4046.00 | ಕಾಯ್ದಿಟ್ಟ ಹಾಗೂ ಇತರೆ ನಿಧಿಗಳು | 241.86 |
| | | ನಿವ್ವಳ ಲಾಭ | 60.02 |

ಶ್ರೀ ಆರ್. ನೀಲಕಂಠಯ್ಯ
ಅಧ್ಯಕ್ಷರು

ಶ್ರೀ ಎಲ್. ರಾಜಪ್ಪ
ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಎಸ್. ಪರಮಶಿವಯ್ಯ
ಶ್ರೀ ವೈ.ಟಿ. ಮಹಾದೇವಪ್ಪ
ಶ್ರೀ ಬಿ.ಜಿ. ನಾಗಬಸಪ್ಪ
ಡಾ. ಮಲ್ಲಿಕಾರ್ಜುನ
ಶ್ರೀ. ಜಿ. ಶಿವಕುಮಾರ್
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ

ಶ್ರೀ ಆರ್.ಜಿ. ಶಿವಕುಮಾರ್
ಶ್ರೀ ಬಿ.ಎಸ್. ಬಾಲರಾಜ್
ಶ್ರೀ ಎನ್.ಎಸ್. ಶಿವಶಂಕರ್
ಶ್ರೀ ಕೆ.ಆರ್. ರಾಮಯ್ಯ
ಶ್ರೀಮತಿ ಜಿ.ಎನ್. ಚಂದ್ರಾವತಿ ಬಿ.ಟಿ. ಉಮೇಶ್

ಪ್ರಧಾನ ವ್ಯವಸ್ಥಾಪಕರು
ಶ್ರೀ ಬಿ.ವಿ. ನಾಗರಾಜ

RNI No. 17139/69 "Siddaganga" Monthly - postal Reg.No. KA/SK/TMR/385/2001




ಫೆಬ್ರವರಿ ೧೭ರಂದು ಏರ್ಪಡಿಸಿದ್ದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ ಪ್ರಾರಂಭೋತ್ಸವ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ಈ ಸಂದರ್ಭದಲ್ಲಿ ಕಂದಾಯ ಸಚಿವ ಹೆಚ್.ಸಿ. ಶ್ರೀಕಂಠಯ್ಯ, ನೀರಾವರಿ ಸಚಿವ ಶ್ರೀ ಹೆಚ್.ಕೆ. ಪಾಟೀಲ್, ಕೃಷಿ ಸಚಿವ ಶ್ರೀ ಡಿ.ಬಿ. ಜಯಚಂದ್ರ, ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜು, ಶಾಸಕ ಶ್ರೀ ಕೆ.ಎಲ್. ರಾಜಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




ಶ್ರೀಮಠದಲ್ಲಿ ಫೆಬ್ರವರಿ ೨೬ರಂದು ಏರ್ಪಡಿಸಿದ್ದ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಅನುಗ್ರಹ ಭಾಷಣ ಮಾಡುತ್ತಿರುವುದು.